ಸಾಹಿತ್ಯ–ಸಂಸ್ಕೃತಿ ಮಾಸಿಕ

ISSN 2320 - 9941



# ಪ್ರತಿಸ್ಪಂದ

ಬೆಲೆ : 10 ರೂ

## ಕೊಡು - ಕೊಳ್ಳುವಿಕೆಗಳ ಸಂಕರ ...

ಸಂಪುಟ : 1 ಸಂಚಿಕೆ : 6 ಜೂನ್ 2013



*"The butterfly counts not months but moments, and has time enough."*

*Rabindranath Tagore*

* ರವೀಂದ್ರನಾಥ ಟ್ಯಾಗೋರ್ ಅವರ ಸ್ವತಂತ್ರ್ಯ ಪ್ರೀತಿ ಮತ್ತು ಸಾವು

* ವ್ಯಕ್ತಿವಿಶಿಷ್ಟತೆಗೆ ಶಿಕ್ಷಣ

* ಪಠ್ಯವೆಂಬ ಅಸ್ತ್ರ ಅಸ್ಗರ್ ಅಲಿ ಇಂಜಿನಿಯರ್ ನೆನಪು



**PROSE =**
words in their best order; —
**POETRY =**
the *best* words in the best order.

* ಪದ್ಯಗಳಲ್ಲಿ ಪದಗಳು




* <u>ಸಂಸ್ಕೃತಿ ಮತ್ತು ಸಂಸ್ಕೃತಿ ಅಧ್ಯಯನದ ಮರುಚಿಂತನೆ:</u>
ಪೂರ್ವದ ಓದು – ಪ್ರಸ್ತುತದ ಅರ್ಥೈಸಿಕೊಳ್ಳುವಿಕೆ – ಭವಿಷ್ಯದ ಚಿಂತನೆ

# ಪ್ರತಿಸ್ಪಂದ

ಮೇ 2013

ಸಂಪುಟ : 1 ಸಂಚಿಕೆ : 5



**ಸಂಪಾದಕರು:**
ಕೆ.ಆರ್. ಬಸವರಾಜು
ತೋಟದ ಮನೆ ನಂ: 107 (25)
ಕಂಚಾಘಟ್ಟ ಹೊಸ ಬಡಾವಣೆ
ತಿಪಟೂರು – 572201
ಮೊ : 9481492481, 9945521522
ಇ–ಮೇಲ್ : prathispandha@gmail.com

**ಮುದ್ರಕರು:**
ಟಿ.ಡಿ.ರಾಮು
ನಿಟ್ಟೂರು,
ಮೊ : 9880951125

**ಮುಖಪುಟ ವಿನ್ಯಾಸ ಕೃಪೆ:**
ಅಂತರ್ಜಾಲ



**ಚಂದಾ ವಿವರ:**

| | |
|---|---|
| ಬಿಡಿ ಪ್ರತಿ | 10 ರೂ |
| ವಾರ್ಷಿಕ ಚಂದಾ | 120 ರೂ |
| ಸಂಸ್ಥೆಗಳಿಗೆ | 150 ರೂ |

ಚಂದಾ ಹಣವನ್ನು ಸಂಪಾದಕರ ವಿಳಾಸಕ್ಕೆ ನಗದು, ಎಂ.ಓ., ಅಥವಾ ಡಿ.ಡಿ. ಮೂಲಕ ಕಳುಹಿಸಬಹುದು.
ಚಂದಾಹಣವನ್ನು ಕಳುಹಿಸುವವರು ತಮ್ಮ ಅಂಚೆ ವಿಳಾಸವನ್ನು ಸ್ಫುಟವಾಗಿ ಬರೆಯಿರಿ.


**ಒಳಪುಟಗಳಲ್ಲಿ**

**ಪುಟ ಸಂಖ್ಯೆ**

# ನಿಮ್ಮೊಂದಿಗೆ ....

*"All things hang like a drop of dew*

*Upon a blade of grass"*

**W.B.Yeats**

ಭಾಷೆಯಾಗಲೀ, ಸಾಹಿತ್ಯವಾಗಲೀ ಒಂದು phenomena.ಈ ಪ್ರಕ್ರಿಯೆಯಲ್ಲಿ ಭಿನ್ನವಾಗುವುದು, ಏಕವಾಗುವುದು, ಬಹುಮುಖವಾಗುವುದು ಅನಿವಾರ್ಯ ಮತ್ತು ಸಹಜ. ಬದುಕಿನ ಲೀಲಾ ವಿನೋದಗಳನ್ನು ಅನುಕರಿಸುವ ಸಾಹಿತ್ಯ ವಾಸ್ತವಕ್ಕೆ ಎಷ್ಟರ ಮಟ್ಟಿಗೆ ಹತ್ತಿರವಾಗಿರುತ್ತದೆ? ಯಾವ ಮಟ್ಟದ ಬದುಕಿನ ಪ್ರತಿಫಲನ ಸಾಹಿತ್ಯಕ್ಕೆ ಗಂಭೀರತೆಯನ್ನೂ, ಓದುಗರಿಗೆ ಸತ್ಯಕ್ಕೆ ಹತ್ತಿರವಾದ ಅನುಭವವನ್ನು ನೀಡಬಲ್ಲದು? ವಿಮರ್ಶೆಯ ಆದಿ ಪ್ರಶ್ನೆಗಳಿವು. Text ಮತ್ತು Context ಗಳನ್ನು ಭಿನ್ನವಾಗಿ ನೋಡುವ ಬಗೆಗಳು ಅಪಾಯಕಾರಿ ತೀರ್ಮಾನಗಳಿಗೆ ಎಡೆ ಮಾಡಿಕೊಡುತ್ತವೆ ಎಂಬ ಎಚ್ಚರ Orientalism ನಂತರದ ವಿಮರ್ಶಕರಲ್ಲಿ ಕಂಡುಬರುತ್ತಿದೆ. ಮಾನವ ಶಾಸ್ತ್ರಜ್ಞ Johannes Fabian ಅನ್ಯತೆಯನ್ನು ವಿವರಿಸಿಕೊಳ್ಳುವ ರೀತಿ ಭಿನ್ನವಾಗಿದೆ. ತನ್ನ "Time and the Other: How Anthropology Makes Its Object" (1983) ಕೃತಿಯಲ್ಲಿ ವಾಸ್ತವತೆ ಮತ್ತು ಅದರ ಪ್ರತಿನಿಧಿಕರಣದ ವ್ಯತ್ಯಾಸಗಳು ಜೊತೆಜೊತೆಗೇ ಮತ್ತೊಂದು ವ್ಯತ್ಯಾಸವನ್ನು ಹೇಗೆ ಪೋಷಿಸುತ್ತಿರುತ್ತವೆ ಎಂದು ವಿವರಿಸುತ್ತಾನೆ. ಈ ವ್ಯತ್ಯಾಸವನ್ನು ಆತ distance ಎಂದು ಕರೆಯುತ್ತಾನೆ. ಇದು ತಿಳಿದವನ/ತಿಳಿಯದವನ, ನೋಡುವವನ /ಅನುಭವಿಸುವವನ ನಡುವೆ ಇರುವ ಅಂತರ. Representation ಮತ್ತು presence ನಡುವಿನ ಸಂಘರ್ಷ ಅದು. ಪ್ರತಿನಿಧಿಕರಣವು ಆಗುವಿಕೆ ಆದಾಗ ಮಾತ್ರ ಅನುಭವವು ನಮ್ಮದಾಗುತ್ತದೆ. ನಿರಂತರವಾಗಿ ನಡೆಯುವ ಅನುಭವ ಜ್ಞಾನದ ತಿಳುವಳಿಕೆಯು ನೋಡುವ ಮತ್ತು ಅನುಭವಿಯ ನಡುವಿನ ಅಂತರವನ್ನು ಇಲ್ಲವಾಗಿಸುತ್ತದೆ. ಅನ್ಯತೆ ಎಂಬುದು 'ಆಗುವ' ಪ್ರಕಿಯೆ ಎಂದು ಫೇಬಿಯನ್ ನಂಬುತ್ತಾನೆ.

ಈ ಸಂಚಿಕೆಯಲ್ಲಿ ಅನ್ಯತೆಯು ಹೇಗೆಲ್ಲಾ 'ಆಗುತ್ತದೆ' ಎಂಬುದನ್ನು ಕಾಣಬಹುದು. ಅನುಭವಿಯು ಅನ್ಯತೆಯನ್ನು ಸ್ವ-ಲಾಭಕ್ಕಾಗಿ ಯಾವತ್ತೂ ಬಳಸಲಾರ. ಅಸ್ಗರ್ ಅಲಿ ಇಂಜಿನಿಯರ್, ರವೀಂದ್ರನಾಥ ಟ್ಯಾಗೋರ್ ಅಂತಹ ಅನುಭವಿಗಳು 'ಅನ್ಯ'ರನ್ನು ಮಾಡಲಾಗುವ ಸನ್ನಿವೇಶ, ಸಂದರ್ಭಗಳನ್ನು ವಿಶ್ಲೇಷಿಸುತ್ತಲೇ, ಆ ಮೂಲಕ ಅನ್ಯರ ಮೇಲೆ ನಡೆಯುವ ಅನೇಕ ತರಹದ ಅನ್ಯಾಯಗಳನ್ನು ಅಭಿವ್ಯಕ್ತಿಸುವ ಕಲೆಯಲ್ಲಿ ಸಿದ್ಧ ಹಸ್ತರಾಗಿದ್ದರು. ಪ್ರಾಚೀನ ಮಹಿಳಾ ಸಾಹಿತ್ಯದಲ್ಲಿ ಅವೈದಿಕ ಮಹಿಳೆಯರು 'ಅನ್ಯರು' ಎಚಿಬ ಕಾರಣಕ್ಕೆ ಅಮೂಲ್ಯವಾದ ಅವರ ಅನುಭವದ ಅಭಿವ್ಯಕ್ತಿಯನ್ನು ಇಂದಿನವರೆಗೂ ನಾವು ಕಂಡಿರಲಿಲ್ಲ. ಇಂತಹ ಎಷ್ಟು ಮುಖಗಳು ಕತ್ತಲೆಯಲ್ಲಿ ಹುದುಗಿರುವವೋ ತಿಳಿದಿಲ್ಲ. ಪದಗಳು ಕಟ್ಟಿಕೊಡುವ ಭಾಷೆ, ಕಟ್ಟಿಕೊಡಲಾಗದ ಸನ್ನಿವೇಶಗಳ ಮೂಲಕ ಸತ್ಯವನ್ನು ಅರಿಯಬೇಕೆಂಬುದೇ ಸಂಸ್ಕೃತಿ ಅಧ್ಯಯನಗಳ ಮಹದಾಸೆ. ಈ ದಿಕ್ಕಿನ ಕಡೆ ಹುಡುಕಾಟ ನಿರಂತರವಾಗಲಿ.

ವಂದನೆಗಳು

– ಸಂಪಾದಕ.



# ರವೀಂದ್ರನಾಥ ಟ್ಯಾಗೋರ್ ಅವರ ಸ್ವತಂತ್ರ್ಯ ಪ್ರೀತಿ ಮತ್ತು ನಾವು



"The butterfly counts not months but moments, and has time enough."

Rabindranath Tagore

ರವೀಂದ್ರ ನಾಥ ಟ್ಯಾಗೋರ್ ವಿಶ್ವ ಕಂಡ ಬಹು ದೊಡ್ಡ ಜ್ಞಾನಜ್ಯೋತಿ ಹಾಗು ಸಾಹಿತ್ಯ ಲೋಕಕ್ಕೆ ಪ್ರಥಮ ನೊಬೆಲ್ ಪುರಸ್ಕಾರವನ್ನು ತಂದುಕೊಟ್ಟ ಭಾರತೀಯ ದಾರ್ಶನಿಕ. ಸಾಹಿತ್ಯದ ಬಹುತೇಕ ಎಲ್ಲಾ ಕ್ಷೇತ್ರದಲ್ಲಿ ತನ್ನ ಬಹುಮುಖ ಪ್ರತಿಭೆಯನ್ನು ಪ್ರಖರಗೊಳಿಸಿದ ಚೈತನ್ಯದ ಚಿಲುಮೆ. ಜಗತ್ತಿನ ಎಲ್ಲಾ ಧರ್ಮ/ಜನಾಂಗದವರಲ್ಲಿ ಬಹು ಸಂಸ್ಕೃತಿಯ ಭಾರತವನ್ನು ಕಂಡಾಗ ಭಾವನಾತ್ಮಕ ಎಳೆಯೊಂದು ಮನಮಿಡಿಯುವಂತೆ ತನ್ನ ಬದುಕು ಮತ್ತು ಬರಹಗಳಿಂದ ಸಂಚಲನವನ್ನು ಮೂಡಿಸಿದ ಶಕ್ತಿರೂಪಕ. ಬದುಕು, ಪ್ರೀತಿ, ಅನುಭಾವಿಕ ನೆಲೆ, ಆಧ್ಯಾತ್ಮ, ಹೋರಾಟ, ಪ್ರಕೃತಿ ಇವರ ಸಾಹಿತ್ಯ ವಸ್ತುಗಳು. ಶತಮಾನಗಳು ಮಾಸಿದರೂ ಟ್ಯಾಗೋರ್ ಅವರ ಸ್ಫೂರ್ತಿ ಮತ್ತು ಶಕ್ತಿಯ ಸೆಲೆ ನಿಗೂಢವಾಗಿಯೇ ಉಳಿದಿದೆ. ಋಷಿ ವಾಲ್ಮೀಕಿಯಂತೆ ಬದುಕಿನ ಸಮಸ್ತವನ್ನು ಕಂಡು ಅದನ್ನು ಸೂಕ್ತ ಪದ-ಚಿತ್ರಗಳ ರೂಪದಲ್ಲಿ ಅಭಿವ್ಯಕ್ತಿಸಿದವರು. ಮನಸ್ಸು ಮತ್ತು ಬುದ್ಧಿಯ ಸಮತೋಲನದೊಂದಿಗೆ ಮಾಧುರ್ಯವನ್ನು ಉನ್ನತೀಕರಿಸುವ ಪ್ರಯತ್ನದಿಂದಾಗಿ ಟ್ಯಾಗೋರರ ಬರವಣಿಗೆಯು ಸಮೃದ್ಧತೆಯ ಸಂಚಲನವುಂಟು ಮಾಡುತ್ತದೆ. ದೈವೀಗುಣ, ಪರಿಶುದ್ಧ ಗುರಿ ಮತ್ತು ಉದ್ದಿಶ್ಯವನ್ನೊಳಗೊಂಡ ಸೃಷ್ಟಿಯ ಪ್ರತಿಯೊಂದು ಭೌತಿಕ ವಸ್ತುವೂ ಅವರ ಕಾಲ್ಪನಿಕ ಶಕ್ತಿಯಿಂದ ಅಭೌತಿಕ ಲೋಕಕ್ಕೆ ಪ್ರವೇಶಿಸುವಂತಿರುತ್ತದೆ. ಯಾಂತ್ರಿಕ ಬದುಕಿನಿಂದ ಹೆಪ್ಪುಗಟ್ಟಿದ ಮನಸ್ಸು ಗೀತಾಂಜಲಿಯ ಓದಿನಿಂದಾಗಿ ಆಧ್ಯಾತ್ಮ ಲೋಕವನ್ನು ಪ್ರವೇಶಿಸುವಂತಾಗಿ ಚಲನಶೀಲವಾಯಿತು ಎಂಬುದು ಕವಿ ಡಬ್ಲ್ಯು.ಬಿ.ಯೇಟ್ಸ್ ನ ಅಭಿಮತ. ಈತನ ಅನುಭವದಲ್ಲಿ, "So Githanjali stirred my blood as nothing had for years."

ಗೀತಾಂಜಲಿಯನ್ನು ಓದಿದ ಯಾರೇ ಆಗಲಿ ಕಾವ್ಯ ಮತ್ತು ಧರ್ಮ ಒಂದು ನಾಣ್ಯದ ಎರಡು ಮುಖಗಳಂತೆ ಎಂದು ಅರ್ಥೈಸುತ್ತಾರೆ. ಸಾಮಾನ್ಯವಾಗಿ ಅನೇಕ ಸಂಗೀತ ವಿದ್ವಾಂಸರು ಪದಗಳಿಗೆ ರಾಗ ಸಂಯೋಜನೆ ಮಾಡುವ ಮೂಲಕ ಸಂಗೀತ ಸೃಷ್ಟಿಸುತ್ತಾರೆ. ಆದರೆ ಟ್ಯಾಗೋರ್ ಸಂಗೀತದೊಂದಿಗೆ ಪದರಚನೆ ಮಾಡುವ ಕಲೆಯನ್ನೂ ಕರಗತ ಮಾಡಿಕೊಂಡಿದ್ದರು. ಅಂದರೆ ಪ್ರತಿಯೊಂದು ಪದವೂ,-ಶಬ್ದವಾಗಿ, ಶಬ್ದವು-ಸಂಗೀತವಾಗಿ ತನ್ನ ಮಾಧುರ್ಯತೆಯಿಂದ ಹೃದಯದ ಬಾಗಿಲನ್ನು ತಟ್ಟುತ್ತದೆ. ಹೀಗೆ ಪ್ರತಿಶಬ್ದವು ಮನೋಲ್ಲಾಸ ಮತ್ತು ಮನಃಪರಿವರ್ತನಾ ಕ್ರಿಯೆಯನ್ನುಂಟು ಮಾಡುತ್ತದೆ. ಗೀತಾಂಜಲಿಯ ಪದ-ಶಬ್ದಗಳು ರೋಮಾಂಚನ ಕಾರಿಯೂ ಕ್ರಾಂತಿಕಾರಿಯೂ ಆಗಿವೆ.

ಟ್ಯಾಗೋರ್ ಅವರ ಬದುಕಿನ ಉದ್ದಕ್ಕೂ ಸಂಗೀತದ ಪ್ರಭಾವ ದಟ್ಟವಾಗಿ ಹರಡಿತ್ತು. ಜಾನ್ ಕೀಟ್ಸ್ ಕವಿಯು ಪ್ರಕೃತಿಯ ಸಕಲ ವಸ್ತುಗಳಲ್ಲಿ ಸೌಂದರ್ಯದ ಸೊಬಗನ್ನು ಸವಿದಂತೆ, ಟ್ಯಾಗೋರ್ ಮಾನವನ ಜೀವನದ ಎಲ್ಲಾ ಮಜಲುಗಳಲ್ಲಿ ಸರ್ವ ರೀತಿಯ ಸಂಗೀತದ ಮಾಧುರ್ಯವನ್ನು ಸವಿದರು. ತನ್ಮೂಲಕ ತಮ್ಮ ಆಲೋಚನಾ ಕ್ರಮ ಮತ್ತು ಕ್ರಿಯೆಯನ್ನು ಸದಾ ವಿಶಾಲಗೊಳಿಸಿ ಹಿಡಿತ ಮತ್ತು ಸಮತೋಲನವನ್ನು ಸಾಧಿಸಲು ಸಾಧ್ಯವಾಯಿತು. ಪಕ್ಷಿಗಳ ಧ್ವನಿ ತರಂಗಗಳನ್ನು ಆಲಿಸುತ್ತಾ, ಪ್ರಕೃತಿಯಲ್ಲಿ ಅರಳುವ ಹೂಗಳನ್ನು ನೋಡುತ್ತಾ ನಿಸರ್ಗದ ಸೌಂದರ್ಯದ ಪರಾಕಾಷ್ಠೆಯನ್ನು ಆನಂದದಿಂದ ಅನುಭವಿಸುವುದರೊಂದಿಗೆ ತಮ್ಮ ವ್ಯಕ್ತಿತ್ವವನ್ನು ವೃದ್ಧಿಸಿಕೊಂಡರು. ವಿಶ್ವವಿಖ್ಯಾತ ಕವಿ ಹಾಗು ತತ್ವಜ್ಞಾನಿಯಾಗಿ ಬೆಳೆದರು.

ಐರಿಷ್ ಕವಿ ಡಬ್ಲ್ಯು.ಬಿ.ಯೇಟ್ಸ್ ಟ್ಯಾಗೂರರ ಬರಹಗಳಿಂದ ಆಕರ್ಷಿತರಾಗಿದ್ದರು. ಇವರ ವಿಚಾರ ಧಾರೆಗಳು ಮತ್ತು ಜೀವನ ಆದರ್ಶಗಳು ಆಧ್ಯಾತ್ಮವನ್ನು ಒಪ್ಪುವಂತೆ ಪ್ರೇರೇಪಿಸಿದವು. ಭಾರತೀಯ ಪ್ರಜ್ಞೆಯನ್ನು

ಪೂರ್ವರಾಷ್ಟ್ರದವರು ಪಶ್ಚಿಮದ ಸಾಹಿತ್ಯ, ಕಲೆ, ಸಂಗೀತದ ಪ್ರಭಾವಕ್ಕೆ ಒಳಗಾದಂತೆ Sir Willaim Jones, Horace willson, Max muller, Emerson, Thoreau, T.S. Eliot, W. B. Yeats ರಂತಹ ಪಾಶ್ಚಾತ್ಯ ಬರಹಗಾರರು ಟ್ಯಾಗೋರ್ ಅವರ ಆಧ್ಯಾತ್ಮಿಕ ಜ್ಞಾನಕ್ಕೆ ಮನಸೋತರು. ದುರಾಡಳಿತವು ತನ್ನ ಪ್ರಾಬಲ್ಯದಿಂದ ನಮ್ಮನ್ನು ಆಳುವಾಗ ನಮ್ಮ ಪ್ರಯತ್ನಗಳು ಸಮಗ್ರವಾಗಿ ಹೊಂದಾಣಿಕೆಯಿಂದ ಕೂಡಿರಬೇಕು ಎಂಬ ಸಂದೇಶವನ್ನು ಟ್ಯಾಗೋರರು ತಮ್ಮ ಸುಪ್ರಸಿದ್ಧ ಕಾದಂಬರಿ The Home and the Worldನಲ್ಲಿ ವಿಶ್ವದ ಎಲ್ಲಾ ರಾಷ್ಟ್ರಗಳಿಗೆ ಮತ್ತು ಕುಟುಂಬಗಳಿಗೆ ರವಾನಿಸುತ್ತಾರೆ. ಎಲ್ಲರ ಒಳಿತಿಗಾಗಿ ಸಮಾಜವು ಸಂಪೂರ್ಣ ಶಾಂತಿ ಮತ್ತು ತೃಪ್ತಿಯನ್ನು ಒಳಗೊಂಡಿರಬೇಕು ಎಂಬ ಆದರ್ಶವನ್ನು ತಿಳಿಸುತ್ತಾರೆ. ಟ್ಯಾಗೋರ್ ಅವರ ಎಲ್ಲಾ ಕೃತಿಗಳಲ್ಲಿ ಪ್ರತ್ಯಕ್ಷ ಮತ್ತು ಪರೋಕ್ಷವಾಗಿ ಭಾರತದ ಸ್ವಾತಂತ್ರ್ಯ ಸಂಗ್ರಾಮದ ಸಂದರ್ಭವು ಹಿನ್ನಲೆಯಾಗಿದೆ. "Where the mind is without fear and the head is held high" ಕವನದಲ್ಲಿ ಮನುಕುಲಕ್ಕೆ ಸ್ವತಂತ್ರ್ಯ ಮತ್ತು ಸ್ವಾಭಿಮಾನದ ಸ್ಥಾನಮಾನ ಮತ್ತು ಮೌಲ್ಯವನ್ನು ಮನವರಿಕೆ ಮಾಡುವ ಪ್ರಯತ್ನವಾಗಿದೆ. ಪ್ರತಿಯೊಬ್ಬ ನಾಗರೀಕನು ಸ್ವಾಭಿಮಾನದಿಂದ ಸಹಜವಾಗಿ ಬದುಕಲು ನಿರ್ಭಯರಾಗಿರಬೇಕೆಂಬುದು ಈ ಕವನದ ಆಶಯವಾಗಿದೆ. Bertrand Russel ರವರೂ ಸಹ ತಮ್ಮ 'Life without Fear' ಪ್ರಬಂಧದಲ್ಲಿ 'Fear makes man unwise' ಎಂದು ಹೇಳಿದ್ದಾರೆ. ಭಾರತದ ಸ್ವತಂತ್ರ್ಯ ಸಂಗ್ರಾಮದ ಸಂದರ್ಭದಲ್ಲಿ ತಮ್ಮ ಬರಹದ ಮೂಲಕ ಮೌಢ್ಯತೆಯಿಂದ ಜಡವಾದ ಭಾರತೀಯರನ್ನು ಜಾಗೃತಗೊಳಿಸಿ, ಸ್ವಾಭಿಮಾನದ ಕಿಚ್ಚಿನ ಮೂಲಕ ಸಂಘಟಿಸಿ ಒಂದು ಸಮಗ್ರ ಶಕ್ತಿಯನ್ನಾಗಿ ರೂಪಿಸಲು ಟ್ಯಾಗೋರ್ ಕಾವ್ಯದ ಸಹಾಯವನ್ನು ಪಡೆದರು. "Where the mind is without fear and the head is held high" ಈ ವಾಕ್ಯದ ಧ್ವನಿಯಲ್ಲಿಯೇ ಕವಿಯು ವಿಚಾರವಂತ, ಕ್ರಾಂತಿಕಾರಿ ಮತ್ತು ಸುಧಾರಕ ಎಂದು ತಿಳಿಯುತ್ತದೆ. ಈ ಘೋಷಣಾ ಕರೆಯು ಕೇವಲ ರಾಷ್ಟ್ರೀಯತೆಯನ್ನು ಹೊರನೋಟಕ್ಕೆ ಬಿಂಬಿಸಿದರೂ ಸಹ ಸ್ವತಂತ್ರ ಮನಃಸ್ಥಿತಿಗೆ ಅವಶ್ಯಕವಾಗಿ ಬೇಕಾದ ಲಕ್ಷಣಗಳೇನು ಎಂಬುದನ್ನು ಎಲ್ಲಾ ಕಾಲಕ್ಕೂ ಅನ್ವಯವಾಗುವಂತೆ ತಿಳಿಸಲು ಪ್ರಯತ್ನಿಸಿರುವುದು ಸತ್ಯವಾಗಿದೆ.

ಪ್ರಸ್ತುತ ನಮ್ಮ ಸಂದರ್ಭಕ್ಕೆ ಅನ್ವಯಿಸಿಕೊಳ್ಳುವುದಾದರೆ ಮನುಷ್ಯರು ನಿರ್ಭಯವಾಗಿ ವ್ಯವಸ್ಥೆಯಲ್ಲಿ ಬದುಕಲು ಜ್ಞಾನದ ಅವಶ್ಯಕತೆಯಿರುತ್ತದೆ. ಇರುವ ಜ್ಞಾನವನ್ನು ಸಕಾಲದಲ್ಲಿ ಸಾಮಾಜಿಕ ಸಂದರ್ಭಕ್ಕನುಗುಣವಾಗಿ ಬಳಸ ಬೇಕಾಗುತ್ತದೆ. ಆಗ ಜ್ಞಾನದ ಫಲದಿಂದ ನಿರ್ಭೀತವಾದ, ಸ್ವಾಭಿಮಾನದ ಮತ್ತು ಸ್ವತಂತ್ರವಾದ ಬದುಕನ್ನು ಕಾಣಲು ಸಾಧ್ಯವಾಗುತ್ತದೆ.ಜ್ಞಾನದ ಜ್ಯೋತಿಯು ಬಾಳಲ್ಲಿ ಬೆಳಗಲು ಅದರ ಸದ್ಬಳಕೆಯಾಗಬೇಕು. ಆ ವಿವೇಚನೆಯ ಬೆಳಕಲ್ಲಿ ಭಯವೆಂಬ ಕತ್ತಲು ಮಾಯವಾಗುತ್ತದೆ.

"Where the clear stream of reason has Not lost its way into the dreary desert sand of dead habit."

ಇಂದು ಬಹುತೇಕ ವಿದ್ಯಾವಂತರು, ಜ್ಞಾನಿಗಳು, ಬುದ್ದಿಜೀವಿಗಳು ಸ್ವತಂತ್ರವಾಗಿ, ಸಹಜವಾಗಿ ಬದುಕುತ್ತಿಲ್ಲ; ಜ್ಞಾನದ ಸಮಯೋಚಿತ ಬಳಕೆ ಮತ್ತು ಅದಕ್ಕೆ ಪೂರಕವಾದ ಮನೋಬಲದ ಸಮನ್ವಯತೆಯ ಕೊರತೆಯಿಂದ ಬಳಲುತ್ತಿದ್ದಾರೆ. ಹಾಗಾದರೆ ಜ್ಞಾನವಿದ್ದರೂ ಬದುಕು ಅನರ್ಥ ಮತ್ತು ಅಪೂರ್ಣವೇ? ಇಲ್ಲ. ಪರಿಜ್ಞಾನದ ಎಚ್ಚರವಾದ ಬಳಕೆ ಇಂದು ಅವಶ್ಯಕ ಮತ್ತು ಅನಿವಾರ್ಯ.

ಪ್ರಸಕ್ತ ದಿನಗಳಲ್ಲಿ ಬಹುಪಾಲು ವಿದ್ಯಾವಂತ ನಾಗರೀಕರಾದ ನಾವು ಬಹುಮುಖ ಜ್ಞಾನಶಾಖೆಗಳಿಂದ ಗಳಿಸಿದ ಜ್ಞಾನದಿಂದ ಸರಳ ಸವಾಲುಗಳನ್ನೂ ಎದುರಿಸಲು ವಿಫಲವಾಗುತ್ತಿದ್ದೇವೆ. ಸರಳ ಸಮಸ್ಯೆಗಳನ್ನು ಮತ್ತಷ್ಟು ಕ್ಲಿಷ್ಟಗೊಳಿಸುವಲ್ಲಿ ನಮ್ಮ ಜ್ಞಾನಸಿದ್ಧಿಯು ಯಶಸ್ವಿಯಾಗಿದೆ. ಕೆಲವೊಮ್ಮೆ ಜ್ಞಾನ ಶೋನ್ಯತೆಯಿಂದಲೂ ಭಯ, ಸ್ವತಂತ್ರ್ಯ ಮತ್ತು ಸ್ವಾಭಿಮಾನ ದಾರಿದ್ರ್ಯವುಂಟಾಗುತ್ತದೆ. ಜ್ಞಾನವನ್ನು ತಪ್ಪಾಗಿ ಅರ್ಥೈಸುವುದರಿಂದ ದುರಭಿಮಾನ, ಸ್ವೇಚ್ಛೆಯ

ಗುಣಗಳು ವೃದ್ಧಿಯಾಗುತ್ತವೆ. ಇವೆಲ್ಲವೂ ನಮ್ಮಲ್ಲಿ ಬದುಕಿನ ಬಗ್ಗೆ ಅಸಹಜ ಭಯವನ್ನು ಬಿತ್ತುವುದಲ್ಲದೆ ಸ್ವತಂತ್ರ ಜೀವನ ಪ್ರೀತಿಯನ್ನು ಕಿತ್ತುಕೊಳ್ಳುತ್ತವೆ. ಸದಾ ವಿಸ್ತಾರವಾಗುವ ವಿಚಾರಗಳು ಮತ್ತು ಕ್ರಿಯಾಶೀಲತೆಯ ಮನಸ್ಸು ಮಾತ್ರವೇ ಸ್ವತಂತ್ರದ ಸವಿಯನ್ನು ಅನುಭವಿಸಬಲ್ಲದು.

"Where the mind is led forward by
Thee into ever-widening thought
and action
Into that heaven of freedom, my
Father,
Let my country awake."

-ಶ್ರೀನಿವಾಸಪ್ಪ.ಜಿ
g.srinivasappa@gmail.com



## ಕವಿತೆ | ಅಶಾಂತ ಕಣಿವೆ

ಒಮ್ಮೆ ಅದು ಸಣ್ಣ ಕಣಿವೆಯತ್ತ ನಕ್ಕಿತು
ಅಲ್ಲಿ ಜನಗಳು ವಾಸಿಸುವುದಿಲ್ಲ
ಅವರೆಲ್ಲರೂ ಮಧ್ಯರಾತ್ರಿಯ ನಕ್ಷತ್ರಗಳನ್ನು
ನಂಬಿ ಯುದ್ಧಕ್ಕಾಗಿ ನಿರ್ಗಮಿಸಿದ್ದಾರೆ
ತಮ್ಮ ಕಣಿವೆಯ ಹೂಗಳನ್ನು
ಆಕಾಶದ ಗೋಪುರಗಳಿಂದ ರಾತ್ರಿಯೆಲ್ಲ ಗಮನಿಸುತ್ತಾರೆ
ಈ ಎಲ್ಲಾ ದಿನಗಳ ಮಧ್ಯದಲ್ಲಿ
ಕೆಂಪು ಸೂರ್ಯನ ಬೆಳಕು
ಸೋಮಾರಿಯಂತೆ ಮಲಗಿದೆ
ಈಗ ಭೇಟಿಕೊಟ್ಟ ಪ್ರತಿಯೊಬ್ಬರು
ನಿವೇದಿಸಿ ಕೊಳ್ಳುತ್ತಿದ್ದಾರೆ
ದುಃಖಿತ ಕಣಿವೆಯ ಅಶಾಂತಿಯನ್ನು
ಅಲ್ಲಿ ಚಲನೆ ಇಲ್ಲದ್ದು ಯಾವುದು ಇಲ್ಲ
ಪವಾಡದಂತಹ ಒಂಟಿತನವನ್ನು ಧ್ಯಾನಿಸುವ
ಗಾಳಿಯನ್ನು ರಕ್ಷಿಸಲು ಯಾರೂ ಇಲ್ಲ
ಯಾವ ಗಾಳಿಯು ಆ ಮರಗಳ
ಮೂಲಕ ಹರದಾಡಲಿಲ್ಲ, ಅದು ತಣ್ಣಗಿನ
ಸಮುದ್ರದಂತೆ ಗುಂಡಿಗೆಯನ್ನು ಬಡಿದುಕೊಳ್ಳುತ್ತಿತ್ತು
ಆ ಮಂಜಿನ ಹೈಬ್ರಿಡ್ ದ್ವೀಪಗಳ ಸುತ್ತ
ಆ ಮೋಡಗಳನ್ನು ಯಾವ ಗಾಳಿಯು
ಹೊತ್ತೊಯ್ಯಲಿಲ್ಲ
ಅದು ಆ ಶಾಂತ ಸ್ವರ್ಗವನ್ನು ಸರಬರಗುಟ್ಟುತ್ತಾ
ಹಾದುಹೋಯಿತು.
ನಸುಕುನಿಂದ ರಾತ್ರಿಯವರೆಗೆ ಕಷ್ಟಪಡುತ್ತಾ
ನೇರಳೆ ಬಣ್ಣದ ಮೇಲೆ ವಿಶ್ರಮಿಸುತ್ತಿದೆ
ಕೋಟ್ಯಾನುಕೋಟಿ ಮನುಷ್ಯರ ಕಣ್ಣಿನಲ್ಲಿ
ಅಲ್ಲಿ ಲಿಲ್ಲಿ ಹೂಗಳ ಮೇಲೆ ಅಲೆಗಳು
ಹೆಸರಿಲ್ಲದ ಸಮಾಧಿಗಳ ಮೇಲೆ ಕಣ್ಣಿರಿಡುತ್ತಿವೆ
ಅವರು ತಮ್ಮ ಸುಗಂಧಭರಿತ ಎತ್ತರಗಳಿಂದ
ಅಲೆಗಳನ್ನೆಬ್ಬಿಸುತ್ತಾರೆ, ಶಾಶ್ವತವಾದ ಮಂಜಿನ
ಹನಿಗಳು ಹನಿಹನಿಯಾಗಿ ಇಳಿಯುತ್ತಿವೆ
ಅವರು ತಮ್ಮ ಸವಿಯಾದ ಬಡ್ಡೆಗಳಿಂದ
ದುಃಖಿಸುತ್ತಿದ್ದಾರೆ, ಅನೇಕ ವರ್ಷಗಳಿಂದ
ಬದುಕಿರುವ ಕಣ್ಣೀರು ರತ್ನದಂತೆ ಇಳಿಯುತ್ತಿದೆ.

ಮೂಲ: ಎಡ್ಗರ್ ಅಲನ್ ಪೋ
ಕನ್ನಡಕ್ಕೆ: ಕಾಂತರಾಜು .ಕೆ

ಪಠ್ಯ ಓದು | ಪಠ್ಯವೆಂಬ ಅಸ್ತ್ರ ಅಸ್ಗರ್ ಅಲಿ ಇಂಜಿನಿಯರ್ ನೆನಪು

(ಅಸ್ಗರ್ ಅಲಿ ಇಂಜಿನಿಯರ್ ಭಾರತೀಯರ ಮನಸ್ಸು ಗಳನ್ನು ಜಾತ್ಯಾತೀತವಾಗಿ ಬೆಸೆದ ಸೂಫೀ ಪರಂಪರೆಯ ನಂಬಿಕೆಗಳನ್ನು ನಂಬಿ ಆಚರಿಸಿದವರು. ಸ್ವಾತಂತ್ರ್ಯಾನಂತರದ ಇತ್ತೀಚಿನ ದಶಕಗಳಲ್ಲಿ ಎಲ್ಲೇ ಮತೀಯ ಕಲಹಗಳಾಗಲೀ, ಕೋಮುಕಾರಣಗಳಿಗಾಗಿ ಬಹುಜನ ಹಿಂಸೆಗಳಾಗಲೀ ನಡೆದಾಗ ಅವರ ವಿವೇಚನೆಯ, ಕರುಣಾಪೂರಿತ ಧ್ವನಿ ಪ್ರತಿಧ್ವನಿಸುತ್ತಿತ್ತು. ತಾವು ನಂಬಿದ ಆದರ್ಶಗಳ ದೆಸೆಯಿಂದ ಬರುತ್ತಿದ್ದ ಸಾವಿನ ಬೆದರಿಕೆಗಳನ್ನಾಗಲೀ, ಮಾರಣಾಂತಿಕ ಹೊಡೆತಗಳನ್ನಾಗಲೀ, ತಮ್ಮ ಜಾತಿಯವರಿಂದಲೇ ಅನುಭವಿಸಬೇಕಾದ ಸಾಮಾಜಿಕ ಬಹಿಷ್ಕಾರವನ್ನಾಗಲೀ ವೈಯುಕ್ತಿಕ ದ್ವೇಷದ ಕಹಿ ಮಾತನ್ನೊಂದೂ ಆಡದೆ ನಿರ್ಲಿಪ್ತವಾಗಿ ಅನುಭವಿಸಿದರು. ಅಸಾಮಾನ್ಯ ಮಾನವತೆ, ಘನತೆ, ಕಲಿಕೆ, ಆರೋಪಗಳನ್ನು ನಿಭಾಯಿಸುವ ಧೈರ್ಯವಂತ ಸಮಾಜಸುಧಾರಕ ಅಸ್ಗರ್ ಅಲಿ ಇಂಜಿನಿಯರ್ ಅವರ ಅಗಲಿಕೆಯಿಂದ ದೇಶ ಬಡವಾಗಿದೆ.

20 ವರ್ಷ ಬಾಂಬೆಯ ಮನ್ಸಿಪಲ್ ನಗರಪಾಲಿಕೆಯಲ್ಲಿ ಇಂಜನಿಯರ್ ಆಗಿ ಕಾರ್ಯ ನಿರ್ವಹಿಸಿದ ಅಸ್ಗರ್ ಅಲಿ ದೇಶದ ಯಾವುದೇ ಭಾಗದಲ್ಲಿ ಮತೀಯ ಸಂಘರ್ಷಗಳಾದಾಗ ಆ ಜಾಗಗಳಿಗೆ ಭೇಟಿ ನೀಡಿ ರಾಜ್ಯದ ಅಧಿಕಾರಿಗಳ, ಮತೀಯ ಸಂಘಸಂಸ್ಥೆಗಳ ಪೂರ್ವಗ್ರಹಪೀಡಿತ ಧೋರಣೆಗಳನ್ನು ಧೈರ್ಯವಾಗಿ ಬಯಲಿಗೆಳೆದು ಸಂತ್ರಸ್ತರಿಗೆ ನೆರವು ಆಯೋಜಿಸುತ್ತಿದ್ದರು. ಕೋಮುವಾದದ ಸಮಸ್ಯೆಯ ಒಳ-ಹೊರಗುಗಳನ್ನು ಅರ್ಥಮಾಡಿಕೊಳ್ಳಲು ಪ್ರತಿಯೊಂದು ಗಲಭೆಯನ್ನೂ ಅನ್ವೇಷಿಸುತ್ತಾ, ಅಭ್ಯಾಸಿಸುತ್ತಾ ಮಾತಿನ ಮೂಲಕ, ಬರಹಗಳ ಮೂಲಕ ಜನರಲ್ಲಿ ಮತಾಂಧತೆಯ ವಿರುದ್ಧ ಜಾಗೃತಿ ಮೂಡಿಸಲು ಪ್ರಯತ್ನಿಸಿದರು.

ಮಾರ್ಕ್ಸವಾದದ ಧ್ಯೇಯಗಳಿಂದ ತೀವ್ರವಾಗಿ ಪ್ರಭಾವಿತರಾಗಿದ್ದರೂ ಸಹ ಧಾರ್ಮಿಕ ನಂಬಿಕೆಗಳನ್ನು ಉಳಿಸಿಕೊಂಡ ಅಪರೂಪದ ಚಿಂತಕರಾದ ಅಸ್ಗರ್ ಅಲಿ ದೇವರ ಜೊತೆ ಸಮಾಜವಾದ ಮಿಳಿತವಾದರೆ ಅದೇ ಇಸ್ಲಾಂ ಎನ್ನುವ ಕವಿ ಇಕ್ಬಾಲ್ ಮಾತನ್ನು ನಂಬುತ್ತಾರೆ. ಪ್ರಜಾಪ್ರಭುತ್ವ ವ್ಯವಸ್ಥೆಗೆ ಹೊಂದಿಕೊಳ್ಳಲು ಇಸ್ಲಾಂ ಯಾವ ರೀತಿ ಬದಲಾಗಬೇಕು ಎಂದು ವಿಶ್ಲೇಷಿಸುತ್ತಲೇ ತಮ್ಮ ಧರ್ಮದ ಮಿತಿ, ಲೋಪ-ದೋಷಗಳನ್ನು ಚರ್ಚಿಸುವ ಅಸ್ಗರ್ ಅಲಿ ಭಾರತೀಯ ಇಸ್ಲಾಂಗೆ ವಿಮೋಚನಾ ಧಾರ್ಮಿಕತೆಯ ಹಂದರವನ್ನು ಕಟ್ಟಿಕೊಡುವಲ್ಲಿ ನಿರತರಾಗಿದ್ದವರು. ಅಮೇರಿಕಾದಂತಹ ಬಲಾಢ್ಯ ರಾಷ್ಟ್ರಗಳು 9/11 ರ ಘಟನೆಯ ನಂತರ ಇಸ್ಲಾಂ ಅನ್ನು ಮಾನವ ವಿರೋಧಿ ಎಂಬಂತೆ ಬಿಂಬಿಸುತ್ತಿರುವುದನ್ನು ತೀವ್ರವಾಗಿ ವಿರೋಧಿಸುತ್ತಲೇ ಇಸ್ಲಾಂ ಧರ್ಮದ ಸೂಫಿ ತತ್ವದ ಪ್ರೀತಿಯ ಸೆಲೆಗಳನ್ನು ಪರಿಚಯಿಸಿದವರು. 1986 ರಲ್ಲಿನ ಶಹಬಾನೂ ಪ್ರಕರಣದಲ್ಲಿ ಸಂಪ್ರದಾಯವಾದಿ ಮುಸ್ಲಿಂಗಳ ತೀವ್ರ ವಿರೋಧದ ನಡುವೆಯೂ ವಿಚ್ಛೇದಿತ ಮುಸ್ಲಿಂ ಮಹಿಳೆಯರ ಹಕ್ಕುಗಳಿಗಾಗಿ ಧ್ವನಿಯಾದರು. ಲಿಂಗ ಸಮಾನತೆ ಅವರ ಪ್ರಮುಖ ಕನಸಾಗಿತ್ತು.

ಸಂತ ಮೊಹಮ್ಮದರ ಆಶಯಗಳನ್ನು ಕುರಾನಿನಲ್ಲಿರುವಂತೆಯೇ ಓದಿಕೊಂಡಿದ್ದರೆ ಮುಸ್ಲಿಂ ಮಹಿಳೆಯರ ಅನೇಕ ಸಮಸ್ಯೆಗಳು ಇರುತ್ತಲೇ ಇರಲಿಲ್ಲ. ಆದರೆ ಧಾರ್ಮಿಕ ಮತಾಂಧತೆಗೆ ಪಠ್ಯಗಳೂ ಕೂಡ ಜನರನ್ನು ಶೋಷಿಸುವ ಅಸ್ತ್ರಗಳಾಗುತ್ತವೆ ಎಂಬುದನ್ನು ನಾವು ಮರೆಯುವಂತಿಲ್ಲ. ಡೆಕ್ಕನ್ ಹೆರಾಲ್ಡ್, ಡಿಸೆಂಬರ್ 2003 ರಲ್ಲಿ ಪ್ರಕಟವಾದ ಅಸ್ಗರ್ ಅಲಿ ಅವರ ಈ ಲೇಖನವನ್ನು ಅವರನ್ನು ನೆನಪಿಸಿಕೊಳ್ಳುವ ಸಲುವಾಗಿ ಅನುವಾದಿಸಲಾಗಿದೆ.)

## ಮುಸ್ಲಿಮ್ ಮಹಿಳೆ ಮತ್ತು ಆಧುನಿಕ ಸಮಾಜ

ಮುಸ್ಲಿಮ್ ಮಹಿಳೆಯರನ್ನು ಎರಡು ರೀತಿಯಾಗಿ ವರ್ಗೀಕರಿಸಬಹುದು. ಮಹಿಳೆಯರ ಕುರಿತಾದ ಷರೀಯಾ ನಿರ್ಧಾರಗಳನ್ನು, ಮುಸ್ಲಿಂ ನ್ಯಾಯವಾದಿಗಳು ಯಾವ ಸನ್ನಿವೇಶದಲ್ಲಿ ಈ ನಿಯಮಗಳನ್ನು ರೂಪಿಸಿದರು ಎಂದು ಪ್ರಶ್ನಿಸದೇ ಸಂಪೂರ್ಣವಾಗಿ ಒಪ್ಪುವವರು ಮೊದಲನೆಯ ವರ್ಗ. ಬಹುತೇಕ ಈ ಹೆಣ್ಣು ಮಕ್ಕಳು ಅವಿದ್ಯಾವಂತರು ಅಥವಾ




ಸಾಂಪ್ರದಾಯಿಕ ಇಸ್ಲಾಂ ವಿಜ್ಞಾನವನ್ನು ಕಲಿತವರು. ಎರಡನೇ ವರ್ಗದ ಮಹಿಳೆಯರು ಧರ್ಮದ ಕುರಿತು ಅನಾಸಕ್ತಿಯನ್ನು ಹೊಂದಿದ್ದು, ಮಹಿಳಾ ಹಕ್ಕುಗಳನ್ನು ಹೊಂದಲು ಧರ್ಮ ಅಡ್ಡಿಯಾಗುತ್ತದೆ ಎಂದು ನಂಬುತ್ತಾರೆ.

ಅಜ್ಞಾನದಿಂದಲೋ ಅಥವಾ ಮತ್ಯಾವುದೇ ಕಾರಣದಿಂದಲೋ ತಮ್ಮ ಧರ್ಮವನ್ನು ಗಂಭೀರವಾಗಿ ಪರಿಗಣಿಸುವ ಮತ್ತು ಷರೀಯಾ ನಿಬಂಧನೆಗಳ ವಿರುದ್ಧ ಹೋರಾಡುತ್ತಿರುವ ಸಾಮಾನ್ಯ ಮುಸ್ಲಿಂ ಮಹಿಳೆಗೆ ಮೇಲೆ ತಿಳಿಸಿರುವ ಎರಡೂ ವಿಪರೀತಗಳು ಯಾವುದೇ ಸಹಾಯ ಮಾಡಲಾರವು. ಈ ಸಾಮಾನ್ಯ ಮಹಿಳೆಯರು ಅಗಣಿತ ಸಂಖ್ಯೆಯಲ್ಲಿರುವುದರಿಂದ ಮುಸ್ಲಿಂ ಸಮಾಜದಲ್ಲಿ ಅವರ ಹಕ್ಕುಗಳನ್ನು ತಿಳಿಸಬೇಕಿದೆ. ಷರೀಯಾ ನಿಯಮಗಳನ್ನು ಕುರಾನಿನ ಬೆಳಕಿನಲ್ಲಿ ಮರುವಿಶ್ಲೇಷಿಸಿ ಇಸ್ಲಾಂ ಮಾಧ್ಯಮದ ಮೂಲಕವೇ ಅವರಿಗೆ ತಿಳುವಳಿಕೆ ನೀಡಬೇಕಿದೆ.

ಮಹಿಳಾ ಹಕ್ಕುಗಳಿಗೆ ಪೂರಕವಾದ ಅಂಶಗಳು ಕುರಾನ್ ನಲ್ಲಿ ಸಾಕಷ್ಟಿವೆ. ಆದರೆ ಈ ಹೇಳಿಕೆಗಳು ನಿರ್ಲಕ್ಷ್ಯಕ್ಕೆ ಒಳಗಾಗಿವೆ ಅಥವಾ ಮಹಿಳೆಯರಿಗೆ ವಿರುದ್ಧವಾಗಿ ವ್ಯಾಖ್ಯಾನಿಸಲ್ಪಟ್ಟಿವೆ. ಪ್ರಜಾಪ್ರಭುತ್ವದ ಇಂದಿನ ವ್ಯವಸ್ಥೆಗೆ ಅನ್ವಯವಾಗುವಂತೆ ಆಧುನಿಕ ಮುಸ್ಲಿಂ ಮಹಿಳೆಯರು ಕುರಾನನ್ನು ಮರು ಓದಿಕೊಳ್ಳಬೇಕಿದೆ. ಈ ದಿಕ್ಕಿನಲ್ಲಿ ಕೆಲವು ಮಹಿಳೆಯರು ಗಂಭೀರ ಪ್ರಯತ್ನ ಮಾಡುತ್ತಿರುವುದು ಇತರರನ್ನು ಪ್ರೇರೇಪಿಸಬಹುದು.

ಈ ಕುರಿತಂತೆ ಸೆಮಿನಾರ್ ಗಳನ್ನು ಆಯೋಜಿಸುತ್ತಾ, ಚರ್ಚಿಸುತ್ತಾ ತಮ್ಮದೇ ಪರಿಭಾಷೆಯಲ್ಲಿ ಇಸ್ಲಾಂಮಿನ ಚೇತನ ಸ್ವರೂಪವಾದ Ijtihad ಅನ್ನು ಮುನ್ನೆಲೆಗೆ ತರಲು ಪ್ರಯತ್ನಿಸುತ್ತಿದ್ದಾರೆ. Ijtihad ಅನ್ನು ಸ್ವಯಂ ಪ್ರವಾದಿ ಮೊಹಮ್ಮದ್ ಅವರೇ ಪ್ರಮಾಣೀಕರಿಸಿದ್ದಾರೆ. ಇಸ್ಲಾಂ ಇತಿಹಾಸದಲ್ಲಿ ಪ್ರಮುಖ ಪಾತ್ರ ವಹಿಸಿರುವ Ijtihad ಅದರ ಮುಖ್ಯವಾದ ಭಾಗವಾಗಿದೆ. ಷರೀಯಾ ಕಾನೂನಿನ ಸಮುಚ್ಚಯ ಅಸ್ತಿತ್ವ ದಲ್ಲಿರುವುದೇ ಇದರ ಕಾರಣಕ್ಕಾಗಿ. ಆದರೆ ಕ್ರಿ.ಶ 11ನೇ ಶತಮಾನದ ನಂತರ ulama (ಮುಸ್ಲಿಂ ಸಮುದಾಯ) Ijtihad ಅನೇಕ ಕಾರಣಗಳಿಗಾಗಿ ವಿರೋಧಿಸತೊಡಗಿತು.

ಮುಖ್ಯವಾಗಿ ಗಮನಿಸಬೇಕಾದ ಅಂಶವೇನೆಂದರೆ ಕುರಾನಿನ ಅನೇಕ ಅನುವಾದಗಳಿವೆ. ಅನುವಾದಕರು ಎಷ್ಟೇ ಪ್ರಾಮಾಣಿಕರಾಗಿದ್ದರೂ, ಲಿಬರಲ್ ಆಗಿದ್ದರೂ ಅನುವಾದಕರ ಸೈದ್ಧಾಂತಿಕ ಬೇಕು ಬೇಡಗಳು ಇಣುಕುತ್ತವೆ. ಉದಾಹರಣೆಗೆ 4:34 ನೆ ಸಾಲುಗಳಲ್ಲಿ ಬರುವ qawwam ಪದವನ್ನು ಆಳುವವನು, ನಿರ್ವಾಹಕ, ಆಧಾರ ನೀಡುವವನು, ಇತ್ಯಾದಿಯಾಗಿ ಅನುವಾದಿಸಿದ್ದಾರೆ. ಪುರುಷರನ್ನು ಕುರಾನ್ qawwamun ಎಂದು ವಿವರಿಸಿದರೆ, ಸಂಪ್ರದಾಯ ನಿಷ್ಠ ಅನುವಾದಕರು "ಪುರುಷರು ಮಹಿಳೆಯರನ್ನು ಆಳುವವರು" ಎಂದು ಅನುವಾದಿಸುತ್ತಾರೆ.

ಇದನ್ನು ಒಪ್ಪದ ಉದಾರ ದೃಷ್ಟಿಯ ಅನುವಾದಕರು ಪುರುಷರನ್ನು ರಕ್ಷಕರು, ನಿರ್ವಾಹಕರು ಇತ್ಯಾದಿಯಾಗಿ ಅನುವಾದಿಸಿದರೂ ಸಹ ಪುರುಷರೇ ಮೇಲು ಎಂಬ ಸೋಂಕು ಇಬ್ಬರಲೂ ಇದ್ದೇ ಇದೆ. ಮತ್ತೆ ಕೆಲವರು ಇದೇ ಪದವನ್ನು ದುಡಿಯುವವರು /ಗಳಿಸುವವರು ಎಂದು ಓದಿಕೊಳ್ಳುತ್ತಾರೆ. ಆಗ qawwamun ಕೇವಲ ಕರ್ತವ್ಯ/ಕಸುಬು ಆಗುತ್ತದೆ. ಯಾವುದೇ ಜೈವಿಕ ಉತ್ತಮಿಕೆಯನ್ನಾಗಲೀ, ಕೀಳರಿಮೆಯನ್ನಾಗಲೀ ಸೂಚಿಸುವುದಿಲ್ಲ ಮತ್ತು ಹೆಣ್ಣೂ ಕೂಡ qawwamun ಆಗಬಹುದು ಯಾಕೆಂದರೆ ಆಧುನಿಕ ಸಮಾಜದಲ್ಲಿ ಹೆಣ್ಣು ಕೂಡ ಗಳಿಸುತ್ತಾಳೆ. ಒಟ್ಟು ಮಾತಿನಲ್ಲಿ ಹೇಳುವುದಾದರೆ ಕುರಾನ್ ಪಠ್ಯವೇ ನಿರ್ಣಾಯಕ ವಾಗಲಾರದು; ಅದನ್ನು ನ್ಯಾಯವಾದಿಗಳು, ಧರ್ಮಶಾಸ್ತ್ರಜ್ಞರು ಹೇಗೆ ಅರ್ಥಮಾಡಿಕೊಂಡು

ಅನ್ವಯಿಸುತ್ತಾರೆ ಎಂಬುದರ ಮೇಲೆ ಹಾಗು ಅವರ ಸಾಂಸ್ಕೃತಿಕ ಮಧ್ಯಸ್ತಿಕೆಯಲ್ಲಿ ನ್ಯಾಯ/ಅನ್ಯಾಯಗಳು ನಿರ್ಧಾರವಾಗುತ್ತದೆ.

ಮಹಿಳಾ ಹಕ್ಕುಗಳಿಗಾಗಿ ಮುಸ್ಲಿಂ ರಾಷ್ಟ್ರಗಳಲ್ಲಿ ತೀವ್ರ ಹೋರಾಟ ನಡೆಯುತ್ತಲೇ ಇದೆ. ಹೆಚ್ಚು ಹೆಚ್ಚು ಹೆಣ್ಣು ಮಕ್ಕಳು ವಿದ್ಯಾವಂತರಾಗುತ್ತಿರುವುದರಿಂದ ಅವರ ಹಕ್ಕುಗಳ ಬಗ್ಗೆ (ಇಸ್ಲಾಂ ಅಥವಾ ಇನ್ನಿತರೆ) ಅವರು ಅರಿಯುತ್ತಿದ್ದಾರೆ ಹಾಗಾಗಿ ಕಾನೂನಿನ ಬದಲಾವಣೆಯನ್ನು ಬಯಸುತ್ತಿದ್ದಾರೆ. ಈ ಸಂಘರ್ಷಗಳಿಂದ ಬದಲಾವಣೆಯಂತೂ ನಿಶ್ಚಿತ. ಇಸ್ಲಾಂ ಹಾಗು ಆಧುನಿಕ ಜಾತ್ಯಾತೀತ ಶಿಕ್ಷಣ ಪಡೆದಿರುವ ಮೊರೊಕೊದ Fatima Merssini ಅಂತಹ ಮಹಿಳಾ ವಿದ್ವಾಂಸರು ದಾರಿ ತೋರುತ್ತಿದ್ದಾರೆ. ತಮ್ಮ ಬರಹ 'The Veil and The Male Elite' ನಲ್ಲಿ ಕುರಾನಿನ ಮತ್ತು ಹದಿಶ್ ಸಾಹಿತ್ಯವನ್ನು ಹೇಗೆ ಅರ್ಥವಾಡಿಕೊಳ್ಳಬೇಕೆಂದು ತಿಳಿಸಿರುತ್ತಾರೆ. ಷರೀಯಾ ನಿಯಮಾವಳಿಗಳ ಆಧಾರವಾದ ಹದಿಶ್ ಸಾಹಿತ್ಯವನ್ನು ವಿಮರ್ಶಾತ್ಮಕವಾಗಿ ವಿಶ್ಲೇಷಿಸಿದ್ದಾರೆ.

ಕಳೆದೆರಡು ಶತಮಾನಗಳಲ್ಲಿ ಜಗತ್ತಿನಲ್ಲಿ ಗಮನಾರ್ಹ ಬದಲಾವಣೆಗಳಾಗಿವೆ. ಒಂದು ಕಾಲಕ್ಕೆ ಮುಸ್ಲಿಂ ಮಹಿಳೆಯರು ನಾಲ್ಕು ಗೋಡೆಗಳಾಚೆಗೆ ಬಂದು ಕುಟುಂಬದಲ್ಲಿ ಗಳಿಸುವ ಸದಸ್ಯೆಯಾಗಬಲ್ಲರು ಎಂಬುವುದನ್ನು ನಂಬಲ್ಲಿಕ್ಕೇ ಅಸಾಧ್ಯವಾಗಿತ್ತು. ಆದರೆ ಇಂದು ಸೌದಿ ಅರೇಬಿಯಾದಂತಹ ದೇಶಗಳಲ್ಲಿಯೂ ಕೂಡ, ಅನೇಕ ಮಿತಿಗಳ ನಡುವೆಯೂ, ಆಚರಣೆಯಲ್ಲಿರುವ ಪದ್ಧತಿಯಾಗಿದೆ. ಪಾಕಿಸ್ತಾನ ಮತ್ತು ಬಾಂಗ್ಲಾದೇಶಗಳಲ್ಲಿ ರಾಜ್ಯಾಧ್ಯಕ್ಷರಾಗಿ ಮಹಿಳೆಯರು ಕಾರ್ಯ ನಿರ್ವಹಿಸಿದ್ದಾರೆ.

ಮಹಿಳೆಯರು ಪ್ರಧಾನಿಗಳಾದ ಮಾತ್ರಕ್ಕೆ ಅಲ್ಲಿನ ಮಹಿಳೆಯರ ದುರ್ಗತಿಗಳು ಕಡಿಮೆಯಾಗಿಲ್ಲ. ಬದಲಾಗಿ ಪಾಕಿಸ್ತಾನ ಮತ್ತು ಬಾಂಗ್ಲಾದೇಶದ ಸಾಮಾಜಿಕ ವ್ಯವಸ್ಥೆಗಳು ತುಂಬಾ ಕ್ಲಿಷ್ಟವಾಗಿವೆ. ಆದ್ದರಿಂದಲೇ ಅಲ್ಲಿನ ಮಹಿಳೆಯರು ಹೆಚ್ಚು ಹೆಚ್ಚು ನರಳುತ್ತಿದ್ದಾರೆ. ಅನೇಕ ಮುಸ್ಲಿಂ ರಾಷ್ಟ್ರಗಳಲ್ಲಿ hudud ಕಾನೂನುಗಳು (ಅಪರಾಧಕ್ಕಾಗಿ ವಿಧಿಸುವ ಶಿಕ್ಷೆಗಳು) ಯಾಂತ್ರಿಕವಾಗಿ ವಿವರಿಸಲ್ಪಟ್ಟಿವೆ. ಮಹಿಳೆಯರು ತಮ್ಮ ಮೇಲೆ ಎಸಗಲಾಗುವ ವ್ಯಭಿಚಾರ ಅಥವಾ ಅತ್ಯಾಚಾರವನ್ನು ವಿರೋಧಿಸಿ ಅಹವಾಲು ಸಲ್ಲಿಸುವ ಪ್ರಯತ್ನಗಳನ್ನು ಮಹಿಳೆಯರ ಅಕ್ರಮ ಲೈಂಗಿಕ ಸಂಬಂಧಗಳ ಕುರಿತ ತಪ್ಪೊಪ್ಪಿಗೆಗಳು ಎಂದು ಅರ್ಥೈಸಲಾಗುತ್ತದೆ. ಅವರನ್ನು ಬಂಧಿಸಿ ಸೆರೆಮನೆಗೆ ದೂಡಲಾಗುತ್ತದೆ ಅಥವಾ ಕಲ್ಲು ಹೊಡೆದು ಸಾಯಿಸಲಾಗುತ್ತದೆ.ಕುರಾನಿನ ಯಾವುದೇ ಭಾಗದಲ್ಲಿ ಇಂತಹ ಕ್ರೂರ ಪದ್ಧತಿಯ ಕುರಿತಾದ ಉಲ್ಲೇಖಗಳಿಲ್ಲ. Hudud ಕಾನೂನುಗಳು hadith ಸಾಹಿತ್ಯವನ್ನು ಅವಲಂಬಿಸಿರುವುದರಿಂದ ಈ ಸಾಹಿತ್ಯವನ್ನು ಮರು ವಿಶ್ಲೇಷಣೆಗೆ ಒಳಪಡಿಸಬೇಕಿದೆ. ಮಹಿಳೆಯರಿಗೆ ಸಂಬಂಧಿಸಿದ ಷರೀಯಾ ಕಾನೂನುಗಳನ್ನು ಕುರಾನಿನ ಮೂಲ ಧ್ಯೇಯಗಳಿಗೆ ಹೊಂದುವಂತೆ, ಅರ್ಥೈಸಿಕೊಳ್ಳಬೇಕಿದೆ. ಇಂತಹ ಪ್ರಯತ್ನಗಳು ಹಕ್ಕುಗಳಿಗಾಗಿ ನಡೆಯುತ್ತಿರುವ ಮಹಿಳಾ ಹೋರಾಟಗಳಿಗೆ ಹೆಚ್ಚು ಬಲತುಂಬುತ್ತದೆ. ಮಹಿಳಾ ಹೋರಾಟಗಾರರು ಇಸ್ಲಾಂ ವಿದ್ವತ್ತಿನ ಮೂಲಗಳನ್ನು ಸಂಶೋಧಿಸಿ ತಿಳಿದುಕೊಳ್ಳಬೇಕು. ಇದಕ್ಕೆ ಸಂಪ್ರದಾಯವಾದಿ ಮುಸ್ಲಿಂ ulama ಗಳಿಂದ ಪ್ರತಿರೋಧ ಎದುರಾಗ ಬಹುದು ಆದರೆ ಬೇರೆ ವಿಧಿಯಿಲ್ಲ. ಹೊಸ ಹಾದಿಯನ್ನು ಮಹಿಳೆಯರೇ ರೂಪಿಸಿಕೊಳ್ಳಬೇಕಿದೆ.

– ಅಸ್ಗರ್ ಅಲಿ ಇಂಜಿನಿಯರ್


ಆಧಾರ:

1. ಡೆಕ್ಕನ್ ಹೆರಾಲ್ಡ್ – ಡಿಸೆಂಬರ್ 2003
2. Harsh Mander - "The Courage of Love" The Hindu June 2013




## ಸಾಹಿತ್ಯ ಶೈಲಿ/ ರೂಪ

# ಪದ್ಯಗಳಲ್ಲಿ ಪದಗಳು

**"Prose is words in best order: Poetry is best words in best order."**

**- Coleridge.**

ಪ್ರಸ್ತುತ ಲೇಖನದ ಉದ್ದೇಶ ಈ 'best words' ನ ಆಯ್ಕೆಯ ಕುರಿತಾಗಿ ಇದೆ. ಪದ್ಯಗಳು ಗದ್ಯಕ್ಕಿಂತ ಭಿನ್ನವಾದವುಗಳು, ಅತೀಕಡಿಮೆ ಶಬ್ದಗಳಲ್ಲಿ ನಿಖರವಾದ, ವಿಸ್ತಾರವಾದ, ವಿಲಕ್ಷಣವಾದ, ಅರ್ಥಗಳನ್ನು ಕಲ್ಪಿಸಿ ಅವುಗಳನ್ನು ಲಯಬದ್ಧವಾಗಿ ಪ್ರಾಸಕ್ಕೆಹೊಂದಿಕೊಳ್ಳುವಂತೆ, ಹಾಡಲು ಬರುವಂತೆ ಬರೆಯುವುದು ಕವಿತೆಯ ಉದ್ದೇಶ. ಹಾಗಾಗಿ ಪದ್ಯಗಳಲ್ಲಿ ಪದಗಳ ಆಯ್ಕೆಯನ್ನು ಬಹಳ ನಾಜೂಕಾಗಿ ಮಾಡಲಾಗುತ್ತದೆ. ಅತೀ ಹೆಚ್ಚು ಅರ್ಥ ವಿಸ್ತಾರತೆಯನ್ನು ಅತೀ ಕಡಿಮೆ ಶಬ್ದಗಳಲ್ಲಿ ಹೇಳಲು ಕವಿಗಳು ಹಲವಾರು ವಿಧಾನಗಳನ್ನು ಅನುಸರಿಸುತ್ತಾರೆ. ಇಂತಹ ಕೆಲವು ವಿಧಾನಗಳ ಕುರಿತು ತಿಳಿಯೋಣ.

**1.**

ಆಲ್ಫ್ರೆಡ್ ಲಾರ್ಡ ಟೆನಿಸನ್ ಬರೆದಿರುವ ಲೋಟಸ್ ಈಟರ್ಸ್ ಪದ್ಯದಲ್ಲಿ ಟ್ರಾಯ್ ನಗರವನ್ನು ವಶಪಡಿಸಿಕೊಂಡ ನಂತರ ಗ್ರೀಕ್‌ನ ಸಮರ್ಥ ಸೇನಾಧಿಪತಿ ಯೂಲಿಸಿಸ್ ತನ್ನ ತಾಯ್ನಾಡಿಗೆ ವಾಪಸ್ಸಾಗುವ ದಾರಿಯಲ್ಲಿ ತನ್ನ ಹಿಂಬಾಲಕರೊಂದಿಗೆ ಸೇರಿ ಹಲವಾರು ಸಾಹಸಗಳನ್ನು ಮಾಡುತ್ತಾ ಹೋಗುತ್ತಾನೆ. ಅಂತಹ ಒಂದು ಸಂದರ್ಭದಲ್ಲಿ ತನ್ನ ಹಿಂಬಾಲಕರೊಂದಿಗೆ ಆಫ್ರಿಕಾದ ತೀರಗಳಲ್ಲಿ ತಂಗುತ್ತಾನೆ. ಅಲ್ಲಿನ ಮೂಲನಿವಾಸಿಗಳು ಅವರಿಗೆ ತಿನ್ನಲು ಹಣ್ಣುಗಳನ್ನು ನೀಡುತ್ತಾರೆ. ಹಣ್ಣು ತಿಂದಾಕ್ಷಣ ಎಲ್ಲರೂ ತಮ್ಮ ತಮ್ಮ ಮನೆಗಳನ್ನು ಮರೆಯುತ್ತಾರೆ. ಅಲ್ಲಿಯೇ ನೆಲೆಸಲು ಬಯಸುತ್ತಾರೆ. ಕನಸಿನಲ್ಲಿ ಇರುವಂತಹ ಭೂ ಪ್ರದೇಶವನ್ನು ಆಹ್ಲಾದಿಸುತ್ತಾ ಜೀವಿಸಿರುತ್ತಾರೆ, ತಾವರೆ ದಳಗಳನ್ನು ತಿನ್ನುತ್ತಾ, ಕನಸು ಕಾಣುತ್ತಾ, ಸೋಮಾರಿಗಳಾಗುತ್ತಾ ಅಲ್ಲಿಯೇ ಇರಲು ಇಷ್ಟ ಪಡುತ್ತಾರೆ. ಈ ಆಲಸ್ಯದ ಮನಃಸ್ಥಿತಿ ಈ ಹಿಂದೆ ಅವರಲ್ಲಿದ್ದ ಸಾಹಸ ಪ್ರವೃತ್ತಿ ಹಾಗು ಪರ್ಯಟನಾ ಮನೋಧರ್ಮಕ್ಕೆ ಸಂಪೂರ್ಣ ವಿರೋಧವಾಗಿರುತ್ತದೆ.

**"But propt on beds of amaranth and molly**
**Hoe sweet (while warm airs lull us, blowing slowly)**
**With half-dropt eyelid still,**
**Beneath a heaven dark and holy,**
**To watch the long, bright river drawing slowly."**

"ಅಮರಾಂತ್ ಮತ್ತು ಮೋಲಿಯ ಹಾಸಿಗೆಯ ಮೇಲೆ ಮಲಗಿದ್ದ ನಾವು ಇಲ್ಲಿ ಎಷ್ಟು ಚಂದವಾಗಿದೆ (ನಿಧಾನವಾಗಿ ಚಲಿಸುವ ಬೆಚ್ಚಗಿನ ಗಾಳಿ ನಮ್ಮನ್ನು ತೂಗುತ್ತಿದೆ) ಅರೆ ಮುಚ್ಚಿದ ಕಣ್ಣುಗಳಲ್ಲಿ ನಾವು ಈ ಕಪ್ಪಗಿನ ಪರ್ವತದಿಂದ ಸ್ವರ್ಗದಿಂದ ಇಳಿದು ಬಂದಂತೆ ನಿಧಾನವಾಗಿ ಹರಿಯುತ್ತಿರುವ ಉದ್ದನೆಯ ನದಿಯನ್ನು ನೋಡುತ್ತಾ, ದ್ರಾಕ್ಷಿ ಬಳ್ಳಿಗಳು ಹೆಣೆದು ಕೊಂಡಿರುವ ಗುಹೆಗಳ ಮೂಲಕ ಮಂಜಿನ ಪ್ರತಿಧ್ವನಿಯನ್ನು ಕೇಳುತ್ತಾ, ದಟ್ಟ ನೀರು ಧುಮ್ಮಿಕುವುದನ್ನು ನೋಡುತ್ತಾ..."

ಸಾಮಾನ್ಯವಾಗಿ ಓದುಗರು ಅಂದುಕೊಳ್ಳುವುದೇನೆಂದರೆ ಪದಗಳು ಅಮೂರ್ತವಾದರೆ ಅಥವಾ ಕ್ಲಿಷ್ಟವಾದರೆ ಅರ್ಥೈಸಿಕೊಳ್ಳುವುದು ಕಷ್ಟ ಎಂದು. ಆದರೆ ಇಂತಹ ಪದಗಳೇ ಪದ್ಯಕ್ಕೆ ವಸ್ತುನಿಷ್ಠತೆಯನ್ನು ತಂದುಕೊಡುತ್ತವೆ. ಅಮರಾಂತ್ ಮತ್ತು ಮೋಲಿ (ಹೂವುಗಳ ಪ್ರಭೇದಗಳು) ಈ ಪದಗಳನ್ನು ನಾವು ಕೇಳಿಲ್ಲ, ಬಳಸಿಲ್ಲ. ಹಾಗಾಗಿ ಇವು ಪದ್ಯಕ್ಕೆ ನಿಗೂಢ, ರಮ್ಯ ಮತ್ತು ಪರಕೀಯತೆಯ ಲಕ್ಷಣಗಳನ್ನು ಕೊಡುತ್ತವೆ. ಹಾಗಂತ ಟೆನ್ನಿಸನ್ ಸುಮ್ಮನೆ ಯಾವುದೋ ಹೂವುಗಳನ್ನು ಹೆಸರಿಸಿಲ್ಲ ಎಂಬುದನ್ನು ನಾವು ಅರ್ಥ ಮಾಡಿಕೊಳ್ಳಬೇಕು.ಹೂಗಳು ಎಂದು ಲಿಟರಲ್ ಅರ್ಥವನ್ನಷ್ಟೇ ಮಾಡಿಕೊಂಡರೆ ಪದ್ಯಕ್ಕೆ ಇರುವ ಆಕರ್ಷಕ ಚಿತ್ರದಂತಹ ಗುಣವನ್ನಷ್ಟೇ ನಾವು ತಿಳಿದಂತಾಗುತ್ತದೆ. ಹೂಗಳೆಂದರೆ ಯಾವುದೇ ತರಹದ ಹೂ ಆಗಬಹುದಲ್ಲವೇ? ಸೇವಂತಿಗೆ, ಮಲ್ಲಿಗೆ , ಜಾಜಿ ಹೀಗೆ. ಸಾಮಾನ್ಯ ಓದುಗನೊಬ್ಬ ತನಗೆ ಯಾವ ಅರ್ಥ ತಿಳಿಯುತ್ತದೋ ಆ ಅರ್ಥವನ್ನಷ್ಟೇ ಮಾಡಿಕೊಂಡು

ಸುಮ್ಮನಾಗುತ್ತಾನೆ. ಆದರೆ ಎಲ್ಲ ಅರ್ಥಗಳ ಅರಿವಿರಬೇಕಾದ ಸೂಕ್ಷ್ಮ ಓದುಗರು ಲಿಟರಲ್ ಅಥವಾ ಪ್ರೈಮರಿ ಅರ್ಥಕ್ಕೆ ಸೀಮಿತವಾಗದೆ ಒಂದು ಹೆಜ್ಜೆ ಮುಂದೆ ಹೋಗಿ ಹೂಗಳು ಎಂಥಹವು, ಎಲ್ಲಿ ಬೆಳೆಯುತ್ತವೆ, ನೋಡಲು ಹೇಗಿರುತ್ತವೆ ಎಂದು ತಿಳಿದುಕೊಂಡು ಅರ್ಥವನ್ನು ವಿಸ್ತರಿಸಿಕೊಳ್ಳುತ್ತಾರೆ.

ಅಮರಂತ್ ಒಂದು ಕಾಲ್ಪನಿಕ ಹೂ. ಇದು ಆಕರ್ಷಕವಾಗಿರುವುದಷ್ಟೇ ಅಲ್ಲ, ಯಾವ ಕಾಲಕ್ಕೂ ಬಾಡುವುದಿಲ್ಲ.ಹಾಗೆಯೇ ಮೋಲಿ ಹೂ. ಪಾಶ್ಚಿಮಾತ್ಯರ ದಂತಕತೆಗಳಲ್ಲಿ ಒಂದಾದಂತಹ ಹೋಮರ್‌ನ ಒಡೇಸಿಯಸ್ ಮಹಾಕಾವ್ಯದಲ್ಲಿ ಉಲ್ಲೇಖವಾಗಿರುವ ಹೂವು ಇದು. ಹಾಲಿನ ಬಿಳೀ ಬಣ್ಣ ಹಾಗು ಕಪ್ಪನೇ ಬೇರು ಹೊಂದಿರುತ್ತದೆ. ತನಗೆ ಬೇಡವಾದವರನ್ನು ಹಂದಿಯಾಗಿ ಬದಲಾಯಿಸುವ ಶಕ್ತಿಹೊಂದಿರುವ ಸಿರ್ಸೆಯಿಂದ ಪಾರಾಗಲು ಹರ್ಮಿಸನು ಒಡೇಸಿಯಸ್ ಗೆ ಈ ಹೂವನ್ನು ನೀಡಿರುತ್ತಾನೆ. ಟನ್ನಿಸನ್ನಿನ ಲೋಟಸ್ ಈಟರ್ಸ್ ಕೂಡ ಹೋಮರ್ ನ ಕಾವ್ಯದಿಂದ ಪ್ರಭಾವಿತವಾದ ಪದ್ಯ. ಹೊಮರ್ ನ ಒಡೇಸಿಯಸ್ ಟನ್ನಿಸನ್‌ನ ಯುಲಿಸಿಯಸ್. ಹಾಗಾಗಿ ಪದ್ಯದ ಅರ್ಥ, ಈ ಸಮೀಕರಣದಿಂದ ವಿಸ್ತರಿಸುತ್ತದೆ, ಹೆಚ್ಚಾಗುತ್ತದೆ. ಯುಲಿಸಸ್ ನಿಗೆ ಒದಗಿ ಬರಬಹುದಾದ ಶ್ರೀ ರಕ್ಷೆಯ ದ್ಯೋತಕಗಳಾಗಿ ಗೋಚರವಾಗುತ್ತವೆ.

ಇದು ಒಂದು ವಿದಾನ. ಕವಿಯು ಪದಗಳ ಆಯ್ಕೆಯನ್ನು ಅವುಗಳ primary ಅರ್ಥದ ಜೊತೆಗೆ secondary ಅರ್ಥಗಳನ್ನೂ ಕೂಡ ಆಯ್ಕೆ ಮಾಡಿಕೊಂಡಿರುತ್ತಾನೆ. ಅಂತೆಯೇ ಪ್ರತಿಯೊಂದು ಪದದ ಅರ್ಥದ ವಿಸ್ತಾರವು ಠಿಡುಟಚಿಡಿಥಿ ಮತ್ತು secondary ಹಂತಗಳನ್ನು ಒಳಗೊಂಡಿರುತ್ತದೆ.

## 2.

ಸಂಕೇತಗಳ ಬಳಕೆ ವಾಚ್ಯಾರ್ಥದಿಂದ ಮುಂದಕ್ಕೂ ಅರ್ಥವನ್ನು ವಿಸ್ತರಿಸುತ್ತದೆ. ಉದಾಹರಣೆಗೆ, Robert Herrick ನ 'To the Virgins, to make much of time' ಪದ್ಯದಲ್ಲಿ,

Gather ye Rose buds while ye may;
Old time is still aflying;
And this same flower that smiles today;
To-morrow will be dying.

ಪದ್ಯದ ಸಾರಾಂಶ ಹೇಳುವುದಾದರೆ "ಬೇಗ ಬೇಗ ಗುಲಾಬಿ ಮೊಗ್ಗುಗಳನ್ನು ಆರಿಸಿಕೊಳ್ಳಿರಿ ಕನ್ಯೆಯರೆ, ಮುದುಕ ಕಾಲನೆಂಬ ಮುದುಕ ಹಾರುತ್ತಿದ್ದಾನೆ. ಈವತ್ತು ನಗುವ ಹೂ ನಾಳೆ ಸಾಯುತ್ತದೆ.

ಪದ್ಯದ ವಾಚ್ಯರ್ಥ ನಿಜವಾದ ಗುಲಾಬಿ ಹೂಗಳನ್ನು ಆರಿಸಿಕೊಳ್ಳಲು ಹೇಳುತ್ತಿದ್ದರೂ ಕೂಡ ಗುಲಾಬಿಯು ಸೌಂಧರ್ಯ, ಪ್ರೇಮ, ಯೌವನದ ಅಸ್ಥಿರತೆಯ ಸಂಕೇತವಾಗುವುದರಿಂದ ಹಾಗು ಕವಿಯು ಕನ್ಯೆಯರನ್ನು ಉದ್ದೇಶಿಸಿ ಮಾತಾಡುತ್ತಿದ್ದಾನೆಂಬುದು ಪದ್ಯದ ಶಿರ್ಷಿಕೆಯಲ್ಲಿಯೇ ಹೇಳಿರುವುದರಿಂದ ಕವಿಯು ಸ್ವಯಂ ನಿರ್ಭಂಧದಲ್ಲಿ ಕನ್ಯೆಯರು ತಮ್ಮ ಯೌವನ ವನ್ನು ಕಟ್ಟಿಹಾಕಿಕೊಂಡಿರುವುದನ್ನು ತ್ಯಜಿಸುವಂತೆ ಹಾಗು ಯೌವನವನ್ನು ಆಸ್ವಾದಿಸು ವಂತೆಯೂ ಕವಿಯು ಸಲಹೆ ನೀಡುತ್ತಿದ್ದಾನೆಂದು ಸೂಚ್ಯವಾಗುತ್ತದೆ. ಹಾಗಾಗಿ ಗುಲಾಬಿಯ ಸಂಕೇತ ಅರ್ಥವು ವಾಚ್ಯಾರ್ಥದಿಂದ ಬಹುದೂರದವರೆಗೆ ವಿಸ್ತಾರವಾಗುತ್ತದೆ.

ಶೇಕ್ಸಪಿಯರ್ ಅರ್ಥವಿಸ್ತರಣೆಗೆ Pun ಗಳನ್ನು ಆಯ್ಕೆ ಮಾಡಿಕೊಳ್ಳುತ್ತಿದ್ದ. ರೋಮಿಯೋ ಜುಲಿಯಟ್ ನಾಟಕದಲ್ಲಿ ಯಾವಾಗಲೂ ಹಾಸ್ಯ ಮಾಡುವ Mercutio ಸಾಯುವ ಗಳಿಗೆಯಲ್ಲಿ Pun ಗಳ ಪ್ರಯೋಗ ಮಾಡುತ್ತಾನೆ.

"Ask for me tomorrow and you shall find me a grave man".

ಇಲ್ಲಿ ಅರ್ಥಗಳು ಎರಡು. ಮೊದಲನೆಯ ದು, ಆತನು ನಾಳೆ ನಾನು ಸಾಯುತ್ತೇನೆ ಎಂದು ಹೇಳುತ್ತಿರಬಹುದು ಅಥವಾ ಕೊನೆಗೂ ನಾನು ಗಂಭೀರವಾಗಿರುತ್ತೇನೆ ಎಂದು ಹೇಳುತ್ತಿರಬಹುದು. Grave ಎನ್ನುವ ಪದಕ್ಕೆ 'serious' ಹಾಗು 'ಗೋರಿ' ಎನ್ನುವ ಎರಡು ಅರ್ಥಗಳಿವೆ.

ರೂಪಕಗಳು ಅರ್ಥವನ್ನು ವಾಚ್ಯಾರ್ಥದಿಂದ ಅಲೌಕಿಕತೆಗೆ ಕರೆದುಕೊಂಡು ಹೋಗಬಹುದೆಂಬುದಕ್ಕೆ ಜಾನ್ ಡನ್ ಕವಿಯ canonisation ಪದ್ಯ ಸಾಕ್ಷಿಯಾಗುತ್ತದೆ. ತಮ್ಮ ಲೌಕಿಕ ಪ್ರೀತಿಯನ್ನು ತಪಸ್ಸಿಗೆ ಹೋಲಿಸುವ ಕವಿ ಅದರ ದೆಸೆಯಿಂದಾಗಿ ತಾವಿಬ್ಬರೂ ಸಂತತ್ವವನ್ನು (canonisation) ಹೊಂದುವುದಾಗಿ ಹೇಳುತ್ತಾನೆ. ಇಲ್ಲಿ ಲೌಕಿಕ ಪ್ರೀತಿಯನ್ನು ಸಂತತ್ವಕ್ಕೆ ಹೋಲಿಸುತ್ತಿರುವುದರಿಂದ ಅತ್ಯಂತ ಸಾಂಸಾರಿಕ

ವಿಷಯವೊಂದನ್ನು ಅಲೌಕಿಕ ವಿಷಯವನ್ನಾಗಿಸುವಷ್ಟು ವಿಸ್ತಾರವಾಗಿ ಎಳೆಯುತ್ತಾನೆ.

"And thus invoke us; "you whom reverend love
And if no piece of chronicle, we prove,
We'll build in sonnets, pretty rooms;
As well as a well wrought urn becomes
The greatest ashes, as half are tombs,
And by these hymns, all shall approve
We cannonised for love."

ಮಿಥ್ ಗಳ ಪ್ರಯೋಗಗಳಲ್ಲಿ ಅರ್ಥವನ್ನು ವರ್ತಮಾನದಿಂದ ಭೂತಕಾಲದವರೆಗೆ ಹಾಗು ಭೂತಕಾಲದಿಂದ ವರ್ತಮಾನ ಕಾಲದವರೆಗೆ ತಲೆಮಾರುಗಳಾಚೆಗೂ ಸಂಗ್ರಹಿಸಬಹುದಾಗಿದೆ ಮತ್ತು ವಿವರಿಸಬಹುದಾಗಿದೆ.

ಶತ ಶತಮಾನಗಳ ಕಾಲ ಜಾತಿ ಹಿಂಸೆಯ ಬೆಂಕಿಯಲ್ಲಿ ನರಳಿದ ದಲಿತರ ಹಿಂಸೆಯ ನೆನಪು ಮರಾಠಿ ಕವಿ ದಯಾಪವಾರ್ ಅವರ Oh Great Poet ಪದ್ಯದಲ್ಲಿ ಕಾಲಮಿತಿಯನ್ನು ದಾಟಿ ವ್ಯಕ್ತವಾಗಿದೆ. ರಾಮಾಯಣ ಬರೆದ ಕವಿ ವಾಲ್ಮೀಕಿ ದಲಿತ. ರಾಮನನ್ನು, ಅವನ ರಾಮರಾಜ್ಯವನ್ನು ಹಾಡಿಹೊಗಳುವ ರಾಮಾಯಣದಲ್ಲಿ ತನ್ನದೇ ಕುಲಸ್ತರಾದ ಶಂಬೂಕ ಮತ್ತು ಏಕಲವ್ಯರಂತಹ ದಲಿತರು ಅವಮಾನ ಅನುಭವಿಸಿದ ಅರಿವು ನಿನಗಾಗಲಿಲ್ಲವೇ ಎಂದು ತನ್ನ ಹಿರೀಕನನ್ನು ದಯಾಪವಾರ್ ಪ್ರಶ್ನಿಸುತ್ತಾರೆ. ಉಳ್ಳವರ ಧ್ವನಿಯಾಗಿ ಕೆಳವರ್ಗದವರ ನೋವುಗಳಿಗೆ ಧ್ವನಿಕೊಡದೆ ಅವರ ಬಂಡಾಯದ ನೋವನ್ನು ಅರ್ಥಮಾಡಿಕೊಳ್ಳದೆ ಇದ್ದದ್ದು ಯಾಕೆಂದು ವಾಲ್ಮೀಕಿಯ ಕಾವ್ಯ ಶ್ರೇಷ್ಠತೆಯನ್ನು ಅಣಕಿಸುತ್ತಾನೆ. ಅಸಮಾನತೆಯನ್ನು ಹೋಗಲಾಡಿಸಲು ಅಸ್ತ್ರವಾದಾಗ ಮಾತ್ರ ಕಾವ್ಯಕ್ಕೆ ಶಕ್ತಿ ಎನ್ನುತ್ತಾನೆ.

"Oh great poet,
How then should we call you a great poet?
Had you written just one single verse
Exposing this injustice, this outrage
Then would your name have been carved on our hearts."

ರಾಮರಾಜ್ಯದ ಪೌರಾಣಿಕ ಕಲ್ಪನೆಯನ್ನು ಕವಿ ವರ್ತಮಾನದ ದಲಿತರ ಶೋಷಣೆಯ ಪರಿಸ್ಥಿತಿಗೆ ಹೋಲಿಸಿ ಮಹಾಕಾವ್ಯದ ಸಂದರ್ಭಗಳನ್ನು ಪ್ರಸ್ತುತ ಸ್ಥಿತಿಗೆ ಅನ್ವಯಿಸಿರುವುದರಿಂದ ಪದಗಳ ಅರ್ಥಗಳು ಪೀಳಿಗೆಗಳಾಚೆ ದಾಟಿ ಹೊಸ ಅರ್ಥವನ್ನು ಸ್ಫುರಿಸುತ್ತವೆ.

– ಕೆ.ಬಿ.ಜ್ಯೋತಿ

jyogowdev@gmail.com

**:ನುಡಿಮುತ್ತುಗಳು:**

* ಹತ್ತು ಸಲ ಕಂಡದಕ್ಕೆ ಕಣ್ಣು ಒಗ್ಗುತ್ತದೆ,
ಹತ್ತು ಸಲ ತಿಂದದಕ್ಕೆ ನಾಲಿಗೆ ಒಗುತ್ತದೆ,
ಮನುಷ್ಯನ ಸ್ವಭಾವವೇ ಅಷ್ಟು – ತರಾಸು

* ಅದೃಷ್ಟ ಒಂದು ಸಂತೆಯಂತೆ ಸ್ವಲ್ಪ ಹೊತ್ತಾದರೆ ಅದರ ಬೆಲೆ ಬಿದ್ದು ಹೋಗುತ್ತದೆ
– ಫ್ರಾನ್ಸಿಸ್ ಬೇಕನ್

* ಅಧಿಕಾರ ಚಲಾಯಿಸುವವರು ಇರುವ ಕಡೆಯಲ್ಲೆಲ್ಲ ಅಧಿಕಾರವನ್ನು ಪ್ರತಿಭಟಿಸುವವರೂ ಕೂಡ ಇರುತ್ತಾರೆ – ಆಸ್ಕರ್‌ವೈಲ್ಡ್

* ಚಿನ್ನ ಬೆಳ್ಳಿ ಮಾತ್ರವೇ ನಾಣ್ಯಗಳಲ್ಲ,
ಗುಣವೂ ನಾಣ್ಯವೇ ಅದು ಜಗತ್ತಿನ ಎಲ್ಲ ಕಡೆಯೂ ಚಲಾವಣೆ ಆಗುತ್ತದೆ.
– ಸಾಫೋಕ್ಲಿಸ್

ಜೀವನ ಲಹರಿ

# ವ್ಯಕ್ತಿವಿಶಿಷ್ಟತೆಗೆ ಶಿಕ್ಷಣ

ಇಂದು ಶಿಕ್ಷಣ ಉದ್ದಿಮೆಯಾಗಿದೆ. ವಿದ್ಯಾರ್ಥಿಗಳಿಗೆ ಸಸ್ಯ-ವೃಕ್ಷ ಸಮೂಹ, ಜೀವರಾಶಿ, ಜಲರಾಶಿ, ಭೌಗೋಳಿಕ ಲಕ್ಷಣ, ಭಾಷಾ ವೈವಿಧ್ಯತೆ, ಸಂಗೀತ, ಸಾಹಿತ್ಯ ಇತ್ಯಾದಿಗಳ ಹಿನ್ನಲೆ ಬಗ್ಗೆ ಸಾಮಾನ್ಯ ತಿಳಿವೂ ಸಿಗುತ್ತಿಲ್ಲ. ಜೀವನದ ಸ್ಪರ್ಶವೇ ಇಲ್ಲದೇ ತನ್ನ ನೆಲೆಯಲ್ಲಿಯೇ ಪರಕೀಯವಾಗುವ ಶಿಕ್ಷಣ ಕಲಿಸುತ್ತಿದ್ದೇವೆ. ಅಂತಸ್ತು-ಅಧಿಕಾರ, ಸ್ಥಾನ-ಮಾನ, ಬಡವ-ಬಲ್ಲಿದ, ನಗರ-ಹಳ್ಳಿ, ಎಂಬ ತರತಮದ ಶ್ರೇಣೀಕೃತ ಶಿಕ್ಷಣ ನೀಡುತ್ತಿದ್ದೇವೆ. ಇದು ಪ್ರಜಾಸತ್ತೆಗೆ ಮಾರಕ. ಏಕರೂಪದ ಶಿಕ್ಷಣವನ್ನು ಪ್ರಾಥಮಿಕ ಹಂತದಲ್ಲಾದರೂ ಗ್ರಹಿಸಲು ಸಾಧ್ಯವಾಗುವ ಮಾತೃಭಾಷೆಯಲ್ಲಿ ಶಿಕ್ಷಣ ನೀಡಬೇಕು. ಶಿಕ್ಷಣವನ್ನು ಕೊಟ್ಟೂ ಕೊಡದಂತೆ ಕೊಟ್ಟು, ಪ್ರತ್ಯೇಕತೆ ಮತ್ತು ತಾರತಮ್ಯ ಬೆಳಸುತ್ತಿದ್ದೇವೆ. ಶಿಶುತನ ಮತ್ತು ಬಾಲ್ಯದಲ್ಲಿ ಕಂಡು ಕೇಳಿ ಪಾಲ್ಗೊಂಡು ಅನುಭವಿಸಿ ಪಡೆಯುವ ಶಿಕ್ಷಣ ಭದ್ರ ಬುನಾದಿ. ಭೇದ-ಭಾವ, ಪ್ರತ್ಯೇಕತೆಯನ್ನು ಗಟ್ಟಿಗೊಳಿಸುವಂತೆ ಧರ್ಮ ಭೋದನೆಯ ಹೆಸರಿನಲ್ಲಿ ಸಂಪ್ರದಾಯದ ವಿಷವನ್ನು ಉಣಿಸುತ್ತಿದ್ದೇವೆ.

ರೂಢಿಗತ ಶಿಕ್ಷಣ ಕೊಡುತ್ತಿರುವ ವಿಶ್ವವಿದ್ಯಾನಿಲಯಗಳು ಜೀವಪರ ಶಿಕ್ಷಣ ನೀಡುತ್ತಿಲ್ಲ. ಜೀವನ ಧಾರೆ ವ್ಯರ್ಥವಾಗುತ್ತಿದೆ. ವ್ಯಕ್ತಿವಿಶಿಷ್ಟತೆ ಅರಿವಿನ ಪ್ರಜ್ಞೆಯನ್ನು ಅನಾವರಣಗೊಳಿಸುತ್ತಿಲ್ಲ. ವಿದ್ಯಾರ್ಥಿಯ ತಲೆ ಉಗ್ರಾಣ ಎಂಬ ಭ್ರಮೆಯಿಂದ ಬೇಕು-ಬೇಡದ ಮಾಹಿತಿ ತುಂಬುತ್ತಿದ್ದೇವೆ. ಭಾಷೆ ಮತ್ತು ಕಲಿಕೆ, ಕಲಿಕೆ ಮತ್ತು ಜೀವನ ಅಸಂಬದ್ಧವಾಗಿದೆ. ಆಧುನಿಕತೆ, ನಾಗರೀಕತೆ, ಉದ್ದಿಮೆ ಎಂಬ ಭ್ರಮಿತ ಸ್ಥಿತಿಯಲ್ಲಿ ಇಂಗ್ಲೀಷ್ ವ್ಯಾಮೋಹ ಪಾರ್ಥೇನಿಯಂ ಅಂತೆ ಹರಡುತ್ತಿದೆ. ಕಂಪ್ಯೂಟರ್ ಕೀಲಿಮಣೆ ಒತ್ತುವ, ರೆಸಿಪ್ಷನಿಷ್ಟ್ ಆಡುವ ಇಂಗ್ಲೀಷ್ ಸಾಕೆಂಬ ಭ್ರಮೆ ಇದೆ. ಕುರುಡಾಗಿ ಅನುಸರಿಸಿದ ಅರೆಬರೆ ತಿಳುವಳಿಕೆ ಅಪಾಯಕಾರಿ. ಬಿತ್ತಿದ್ದನ್ನು ಬೆಳೆದು ಬೆಳೆದದ್ದನ್ನು ಉಣಬೇಕಿದೆ. ಇಂತಹ ಶಿಕ್ಷಣ ಪಡೆಯುತ್ತಿರುವವರು ಎಲ್ಲಿಯೂ ಸಲ್ಲದವರಾಗುತ್ತಿದ್ದಾರೆ.

ಜೀವನದ ಸಮಸ್ತ ಪರಿಮಳ ಸ್ವಂತಿಕೆಯಲ್ಲಿದೆ. ತನ್ನತನದಲ್ಲಿದೆ. ಶಿಕ್ಷಣದಲ್ಲಿ ಸ್ಥಿರತೆ ಸಮಗ್ರತೆಯ ಕಲ್ಪನೆ ಇಲ್ಲದಿದ್ದರೆ ಎಲ್ಲವೂ ವ್ಯರ್ಥ. ಜ್ಞಾನ ಅರಿವು ಬರುವುದು ಅಂತಃಸತ್ವದಲ್ಲಿ, ನೆನಪಿನ ಸುರಳಿಯಿಂದಲ್ಲ. ಅರಿವಿಗೆ ಪ್ರತಿಯೊಂದೂ ಹೊಸತು ಆಗಿರುತ್ತದೆ. ಹಳತು ಅಲ್ಲ. ಜಾಗೃತನಾದವನು ಅಸ್ತಿತ್ವದೊಂದಿಗೆ ಜೀವಿಸುವನು. ಇರುವಿಕೆಯ ಆಳಕ್ಕೆ ಇಳಿದು ಸದಾ ಹೊಸದನ್ನು ಕಂಡುಕೊಳ್ಳುತ್ತಲೇ ಇರುತ್ತಾನೆ. ಜಾಗೃತರಾಗುವುದು ಎನ್ನುವುದರ ಅರ್ಥ ತನ್ನ ಪ್ರಜ್ಞೆಯನ್ನು ವಿಸ್ತರಿಸುತ್ತಾ ಹೋಗುವುದು. ಸದಾ ಕಲಿಯಲು ಸಿದ್ಧನಿರುವುದು. ಎಲ್ಲಾ ಸಾಧ್ಯತೆಗಳಿಗೂ ತೆರೆದುಕೊಳ್ಳುವುದು. ಅರಿವು ಎಂದರೆ ಸತ್ಯವನ್ನು ನೋಡುವ ಸಾಮರ್ಥ್ಯ ಹಾಗು ಅಸ್ತಿತ್ವದೊಂದಿಗಿರುವುದು. ಅದೇ ಪ್ರಭುದ್ಧತೆ. ಅನುಕರಣೆ ಅಪ್ರಯೋಜಕ. ಅದು ರೂಪಾಂತರಿಸುವುದಿಲ್ಲ. ಪ್ರಭುದ್ಧನಾಗುವುದು ನಿರಂತರ ಪ್ರಕ್ರಿಯೆ. ನಂಬಿಕೆ, ಅನುಸರಣೆ ಬುದ್ಧಿವಂತಿಕೆಯಲ್ಲ.

ಜಾಗತೀಕರಣದ ಈ ಕಾಲಘಟ್ಟದಲ್ಲಿ ಸಾರ್ವಜನಿಕ ಕ್ಷೇತ್ರ ಕಿರಿದಾಗಿ ಸಾಮಾಜಿಕ ಹೊಣೆಗಾರಿಕೆಯನ್ನು ಒಪ್ಪಿಕೊಳ್ಳದ ಮಾರುಕಟ್ಟೆಗಳದ್ದೇ ರಾಜ್ಯಭಾರವಾಗಿದೆ. ಅಸಾಧಾರಣ ಸಂಪತ್ತು ಒಂದುಕಡೆ ಸಂಗ್ರಹವಾಗುತ್ತಿದೆ. ಅಸಹನೀಯವಾದ ದಾರಿದ್ರ್ಯ ಮತ್ತೊಂದು ಕಡೆ ತಾಂಡವವಾಡುತ್ತಿದೆ. ಮಾರುಕಟ್ಟೆ ಮೌಲ್ಯಗಳಿಗೆ ಬೆಲೆಕೊಟ್ಟು ಪೈಪೋಟಿ ಸಂಸ್ಕೃತಿ ಬೆಳೆಯುತ್ತಿದೆ. ಆದ್ದರಿಂದ ಸ್ಪರ್ಧೆ, ಸ್ವಾರ್ಥ, ಆಕ್ರಮಣಶೀಲತೆ, ದಬ್ಬಾಳಿಕೆ, ಹಿಂಸೆ, ಅಸಮಾನತೆ, ಅನ್ಯಾಯಗಳು ಅನಿವಾರ್ಯ ವೆನಿಸುತ್ತಿವೆ. ಇವು ಶಿಕ್ಷಣ ಕ್ಷೇತ್ರವನ್ನೂ ಪ್ರವೇಶಿಸುತ್ತಿವೆ. ಸ್ವಾವಲಂಬನೆಗೆ ಅವಕಾಶ ನೀಡದ ತಂತ್ರಜ್ಞಾನಕ್ಕೆ ಆದ್ಯತೆ ಇದೆ. ಇದರಿಂದ ವಿಶಿಷ್ಟ ಸಾಮರ್ಥ್ಯವುಳ್ಳ ಪ್ರತಿಭಾನ್ವಿತ ವಿದ್ಯಾರ್ಥಿಗಳೂ ಕೂಡ ಯಂತ್ರವೊಂದರ ಬಿಡಿ ಭಾಗದಂತೆ ತರಬೇತಿ ಪಡೆಯುತ್ತಿದ್ದಾರೆ. ದುಡ್ಡಿನ ಬೆನ್ನು ಹತ್ತಿ ಮರುಳಾಗುತ್ತಿದ್ದಾರೆ. ಶಿಕ್ಷಣ ಕ್ಷೇತ್ರಕ್ಕೂ ಮಾರುಕಟ್ಟೆ ಪ್ರವೇಶಿಸಿದೆ. ಶಿಕ್ಷಣ ಇಂದು ಬಂಡವಾಳ ಹಾಕಿ ಬಂಡವಾಳ ತೆಗೆಯುವ ದಂಧೆಯಾಗಿದೆ. ಇದು ಸಮಾಜಸೇವೆಯ ಹೆಸರಿನಲ್ಲಿಯೇ ನಡೆಯುತ್ತಿದೆ.

ಇದು ಸಮಾಜಸೇವೆಯ ಹೆಸರಿನಲ್ಲಿಯೇ ನಡೆಯುತ್ತಿದೆ. ಇಂದಿನ ಸೀಮಿತ ಆಶಯದ ಶಿಕ್ಷಣದಲ್ಲಿ ಸಮಗ್ರತೆಯ ಕಲ್ಪನೆಯಿಲ್ಲ. ಸತ್ಪ್ರಜೆಗಳ ನಿರ್ಮಾಣ ವಾಗುತ್ತಿಲ್ಲ. ಶಿಕ್ಷಕರು ಇಂದಿನ ದಿನಮಾನದಲ್ಲಿ ಕಾರ್ಮಿಕರಂತೆ ಸಂಬಳಕ್ಕಾಗಿ ದುಡಿಯುವ ನೌಕರರು. ಒಂದು ಕಾಲಕ್ಕೆ ಶಿಕ್ಷಕರು (ಗುರುಗಳು), ಪೂಜನೀಯರು, ಜ್ಞಾನಿಗಳು, ಮಾರ್ಗದರ್ಶಿಗಳು ಎಂದು ಗೌರವಾನ್ವಿತರಾಗಿದ್ದರು. ಶಿಲೆಯನ್ನು ಶಿಲ್ಪವಾಗಿಸುವವರಾಗಿದ್ದರು.

ವಿಚಾರ ತುಂಬುವುದರಿಂದ ಚಿತ್ತ ದಣೆಯುತ್ತದೆ. ವಿಚಾರ ಜಾಗೃತಿಯಿಂದ ಚಿತ್ತ ಜೀವಂತವಾಗುತ್ತದೆ. ಜೀವನ ಸ್ವವಿವೇಕದ ಪ್ರಕಾಶದಲ್ಲಿ ಚಲಿಸಿದಾಗ ಅರಾಜಕತೆ, ಸ್ವಚ್ಛಂದತೆ ಇರುವುದಿಲ್ಲ. ಆದರ್ಶಗಳನ್ನು ಹೇರುವುದರಿಂದ , ಪ್ರಥಮರಾಗಿ ಎಂದು ಒತ್ತಾಯಿಸುವುದರಿಂದ ಅಹಂಕಾರದ ಬೇತಾಳವನ್ನು ಮಕ್ಕಳ ಬೆನ್ನಮೇಲೆ ಹತ್ತಿಸಿದಂತಾಗುತ್ತದೆ. ಅದರಿಂದ ಅಂತ್ಯವಿಲ್ಲದ ಓಟದಲ್ಲಿ ಅವರು ವಿಕ್ಷಿಪ್ತರಾಗುತ್ತಾರೆ, ದುರ್ಬಲರು ಪರಾವಲಂಭಿಗಳಾಗುತ್ತಾರೆ. ಅವರಿಗೆ ಸಹಜತೆ, ಜಾಗೃತಿ ಬರುವುದಿಲ್ಲ. ಜೀವನದ ಕೇಂದ್ರ ಶಿಕ್ಷಣದ ಕೇಂದ್ರವಾಗಬೇಕು. ಭಯಗ್ರಸ್ತ ಚಿತ್ತ ರಕ್ಷಣೆಯನ್ನು ಬೇಡುವುದು. ಸತ್ಯವನ್ನು ಕಾಣಲಾರದು. ತಿಳಿದುಕೊಳ್ಳಲು, ರೂಪಾಂತರಗೊಳ್ಳಲು ಸಿದ್ಧನಿರುವವನೇ ವಿದ್ಯಾರ್ಥಿ. ಪರಿಸ್ಥಿತಿ ವ್ಯಕ್ತಿಯಲ್ಲಿರುವ ಸಾಧ್ಯತೆಗಳನ್ನು ನಶಿಸುವಂತಿರಬಾರದು. ಶಿಕ್ಷಣವೆಂದರೆ ಪ್ರತಿಸ್ಪರ್ಧೆ ಇಲ್ಲದ ಅಸೂಯೆ ಇಲ್ಲದ ಅಹಿಂಸಾತ್ಮಕ ಪ್ರೇಮಪೂರ್ಣ ಕರುಣಾಪೂರ್ಣ ಚಿತ್ತವನ್ನು ಸೃಜಿಸುವಂತಾಗಬೇಕು. ಪ್ರತಿವ್ಯಕ್ತಿಯೂ ವೈಶಿಷ್ಟವುಳ್ಳವನು. ವಿದ್ಯಾರ್ಥಿಗಳೆಲ್ಲರನ್ನೂ ಯಂತ್ರದ ಪಡಿಯಚ್ಚುಗಳಂತೆ ಮಾಡಲಾಗದು, ಮಾಡಬಾರದು. ಮಕ್ಕಳಿಗೆ ಕೊಡಬೇಕಾದದ್ದು ರೂಢಿಗತವಾದ ಜ್ಞಾನವನ್ನಲ್ಲ. ವಿಶಿಷ್ಟವ್ಯಕ್ತಿಯಾಗುವ ಶಿಕ್ಷಣ ನೀಡಬೇಕು. ಕಲಿಯುವ ತೃಷೆ ಬೆಳೆಸಬೇಕು. ಯಾವುದೇ ವಿಚಾರವನ್ನು ಇನ್ನೊಬ್ಬರಮೇಲೆ ಬಲವಂತವಾಗಿ ಹೇರುವುದನ್ನು ನಿಲ್ಲಿಸಬೇಕು. ಪ್ರಜ್ಞೆಯ, ಅರಿವಿನ ಆನಂದ ಸ್ಥಿತಿಯ ದಿಸೆಯಲ್ಲಿ ಮುನ್ನಡೆಯಲು ಸಹಕರಿಸಿದಾಗ ಮಾನವೀಯತೆ ಉದಯವಾಗುತ್ತದೆ.

– ಕೆ.ಆರ್. ಬಸವರಾಜು

| ಸೃಜನಶೀಲ | ಆಸರೆಯ ಬೇಡಿಕೆ |
|---|---|

ಕವಿದ ಕತ್ತಲೆಯಲಿ
ಮಿಣುಕಿ ಮರೆಯಾಗುತಿಹ
ನಿನ್ನ ತಿಳಿ ಬೆಳಕಿನಲಿ
ದಾರಿ ಕಾಣಲು ತಪಿಸಿ
ಸೋಲುತಿಹೆ ನಾನು.

ಮನದ ದುಗುಡವ ಮೀರಿ
ಕವಿದ ಮೌನದ ಲಹರಿ
ಮುರಿದು ಪೊರೆ
ಭವಿತವ್ಯ ಕರಗುತಿದೆ
ಬಾಳ ಮುಂಜಾವಿನಲಿ

ಬೆಳೆವ ಮಲ್ಲಿಗೆ ಬಲ್ಲಿ
ಸ್ಫುಟಿತ ಕುಸುಮವ ಚೆಲ್ಲಿ
ಆಸರೆ ಬೇಡುವ ತೆರದಿ
ಬೇಡಿ ಬಂದಿಹೆ ನಾನು ನಿನ್ನ ಕೈಸೆರೆ

ತಪ್ಪೊ ಒಪ್ಪೊ ಅರಿಯೆ
ಕಪಟ ಮೋಸವನರಿಯೆ
ಆಸರೆ ಬೇಡಿಹ ನನ್ನ ನೀ ಪೊರೆಯೆ

– ಟಿ.ಡಿ. ರಾಮು
tdramu.td@gmail.com



| ಅನುವಾದ/ ವಿಮರ್ಶೆ | ಪ್ರಾಚೀನ ಭಾರತದ ಸ್ತ್ರೀ ಸಾಹಿತ್ಯ : ಪೌರಸ್ತ್ಯ ನೆಲೆಯ ವಿರುದ್ಧ ಓದು | ಭಾಗ -2 |
|---|---|---|

[ವಸಾಹತು ಪೂರ್ವ ಕಾಲದಲ್ಲಿ ದೊರೆತಿರುವ ಅಚ್ಚರಿ ಹುಟ್ಟಿಸುವ ವೈವಿಧ್ಯಮಯ ಸ್ತ್ರೀ ಸಾಹಿತ್ಯವು ಗಂಭೀರವಾದ ಸಂಶೋಧನೆಗೆ ಒಳಪಡದೆ ನಿರ್ಲಕ್ಷ್ಯವಾಗಿರುವ ಸಂಗತಿಯನ್ನು ತೆರೆದಿಡುವ ಸಲುವಾಗಿ ಸೂಸಿ ಥಾರು ಮತ್ತು ಕೆ.ಲಲಿತ "Women Writing in India" Vol-I & Vol-II (600 BC to the Early Twentieth Century) ಸಂಕಲನಗಳಲ್ಲಿ ಈ ಮಹಿಳೆಯರ ಸಾಹಿತ್ಯ ಶ್ರೇಷ್ಠತೆಯನ್ನು ಅಭಿವ್ಯಕ್ತ ಪಡಿಸುವ ಕೃತಿಗಳನ್ನು ಕಲೆಹಾಕಿದ್ದಾರೆ. ಈ ವಸಾಹತು ಪೂರ್ವ ಮಹಿಳೆಯರ ಸಾಹಿತ್ಯ ರಚನೆಯನ್ನು ಸ್ತ್ರೀ ವಾದಿ ನೆಲೆಯಿಂದ ಪರಿಗಣಿಸಿರುವುದರಿಂದ ಗತಕಾಲದ ಕುರಿತು ಪ್ರಚಲಿತ ಇರುವ ಪ್ರಭಲ ಪ್ರತಿನಿಧಿತ್ವಗಳನ್ನು ಪ್ರಶ್ನಿಸಲು ಅನುಕೂಲವಾಗಿದೆ. ಪ್ರಾಚೀನ ಕಾಲದ ಮಹಿಳಾ ಸಾಹಿತ್ಯಕ್ಕೆ ಸೂಸಿ ಥಾರು ಮತ್ತು ಕೆ.ಲಲಿತ ಬರೆದಿರುವ ಮುನ್ನುಡಿಯ ಅನುವಾದ ಈ ಲೇಖನ.]

## II

### ಪ್ರಾಚೀನ ಭಾರತದ ಮಹಿಳಾ ಸಾಹಿತ್ಯ

ತುಂಬಾ ಕಡಿಮೆ ಪ್ರಮಾಣದಲ್ಲಿ ದೊರೆತಿರುವ ವಸಾಹತು ಪೂರ್ವ ಮಹಿಳಾ ಸಾಹಿತ್ಯವು ಆರ್ಯ ಪೂರ್ವ ಅಥವಾ ಆರ್ಯವಲ್ಲದ ಮೂಲಗಳನ್ನು ಅವಲಂಬಿಸಿರುವುದು ಕಂಡು ಬರುತ್ತದೆ. ಆರ್ಯನ್ ಅಥವಾ ವ್ಯಾಪಕವಾದ ಬ್ರಾಹ್ಮಣ್ಯವನ್ನು ಪ್ರಶ್ನಿಸಿದ ಪ್ರಭಲ ಚಾರಿತ್ರಿಕ ಚಳುವಳಿಗಳು ಹಾಗು ಅವು ಪ್ರತಿನಿಧಿಸಿದ ವಿರೋಧಿ ರಾಜಕೀಯ ಗುಂಪುಗಳು ಅಥವಾ ಉಗಮವಾಗುತ್ತಿದ್ದ ಸಾಮಾಜಿಕ ವರ್ಗಗಳ ಈ ಕಾಲಘಟ್ಟದಲ್ಲಿ ಮಹಿಳೆಯರ ಸಾಹಿತ್ಯ ಸೃಷ್ಟಿಗೆ ಅವಕಾಶಗಳು ಪದೇ ಪದೇ ಒದಗಿ ಬಂದಿರುವುದನ್ನು ನಾವಿಲ್ಲಿ ಕಾಣಬಹುದು. ಕ್ರಿ.ಶ 1ರಿಂದ 3ರವರೆಗೆ ಕಂಡು ಬರುವ ತಮಿಳು ಸಂಗಮ ಸಾಹಿತ್ಯದಲ್ಲಿ ಆರ್ಯ ಪುರಾಣಗಳನ್ನು ಕುರಿತ ಯಾವುದೇ ಉಲ್ಲೇಖಗಳು ಕಂಡು ಬರುವುದಿಲ್ಲ. ಹಾ ಗಾಗಿ ಅಗಾಧ ಪ್ರಮಾಣದಲ್ಲಿ ದೊರೆತಿರುವ ಸಂಗಮ ಸಾಹಿತ್ಯವು ಆರ್ಯ-ಪೂರ್ವ ಮತ್ತು ವ್ಯವಸಾಯ ಕೇಂದ್ರಿತ ಸಮಾಜಗಳಿಂದ ಬಂದಂತಹದು. ಜಾತಿ ಬೇಧಭಾವ ಹಾಗು ಬ್ರಾಹ್ಮಣ ಪೂಜಾರಿಗಳ ಹಿಡಿತದಲ್ಲಿದ್ದ ಹಿಂದು ಆಚರಣೆಗಳನ್ನು ವಿರೋಧಿಸಿದ ಚಳುವಳಿಗಳು ಬೌದ್ಧ ಮತ್ತು ಭಕ್ತಿ ಕಾವ್ಯದ ಉಗಮಕ್ಕೆ ಕಾರಣವಾಗಿದ್ದವು. ನಂತರದ ಕಾಲದಲ್ಲಿ ಕಂಡು ಬಂದ ಜಾತ್ಯಾತೀತ ಸಾಹಿತ್ಯವು ಆಸ್ಥಾನಗಳಲ್ಲಿ, ಮುಖ್ಯವಾಗಿ ಮೊಘಲ್ ಆಶ್ರಯದಲ್ಲಿ ಪೋಷಣೆಯನ್ನು ಪಡೆದುಕೊಂಡಿತು. ಈ ಕಾಲದ ಮಹಿಳೆಯರು ಹಾಡಿರುವ ಪ್ರತಿಯೊಂದು ಜಾನಪದ ಹಾಡುಗಳಲ್ಲಿ ವ್ಯವಸಾಯದ ಕಾಲಚಕ್ರಗಳನ್ನು ಸಂಭ್ರಮಿಸುವ ಸ್ಥಳೀಯ ಆರ್ಯನ್ ಅಲ್ಲದ ಆಚರಣೆಗಳು ದಾಖಲಾಗಿವೆ.



ಕಿ.ಪೂ 1700 ರ ವೇಳೆಗೆ ಮೊದಲ ಆರ್ಯನ್ ಧಾಳಿಗಳು ನಡೆದ ನಂತರ ದೇಸೀ ಸಂಸ್ಕೃತಿಗಳ ಮತ್ತು ಆರ್ಯ ಸಂಸ್ಕೃತಿಗಳ ನಡುವೆ ನಿರಂತರವಾದ ಪರಸ್ಪರ ಪ್ರಭಾವಗಳನ್ನು ಗಮನಿಸ ಬಹುದು. 1925ರಲ್ಲಿ ಅಗಾಧವಾದ ನಗರೀಕರಣದ ಅವಶೇಷಗಳನ್ನು ಒಳಗೊಂಡ ಹರಪ್ಪ-ಮಹೇಂಜದಾರೋ ಆವಿಷ್ಕಾರಗಳು ಕಿ.ಪೂ 3000 ವರ್ಷಗಳ ಬದುಕನ್ನು (ಆರ್ಯರ ವೇದಗಳಲ್ಲಿ ಈ ನಾಗರೀಕತೆಯ ಉಲ್ಲೇಖ ಸಹ ಇಲ್ಲ) ತೆರೆದಿಟ್ಟವು. ಆರ್ಯರು ಭಾರತದ ಈ ಹಿಮಾಲಯನ್ ಕಣಿವೆಗಳಿಗೆ ಮೊದಲು ಬಂದಾಗ ಇಲ್ಲಿ ಅವರು ಕಂಡದ್ದು ಸಂಪದ್ಭರಿತವಾದ, ಅಭಿವೃದ್ಧಿಹೊಂದಿದ ನಾಗರೀಕ ಸಂಸ್ಥೆಗಳು,ಕ್ರಮವಾದ ನಾಣ್ಯ ವ್ಯವಸ್ಥೆ ಮತ್ತು ವಿದೇಶಗಳ ಜೊತೆ ಪ್ರಭುದ್ಧ ವ್ಯಾಪಾರ ಸಂಬಂಧಗಳನ್ನು. ಗ್ರಾಮ್ಯ (Pastoral) ಆರ್ಯರ ಮೌಖಿಕ ಕಥನಗಳಿಗೆ

ವ್ಯತಿರಿಕ್ತವಾಗಿ ವ್ಯವಸಾಯ ಕೇಂದ್ರಿತ ಸಮಾಜಗಳಾಗಿದ್ದವು. Sedentary ಜೀವನ ಲಕ್ಷಣಕ್ಕೆ ಅನುಗುಣವಾಗಿ ಅವರ ಕಲಾ ಪ್ರಕಾರಗಳು ದೃಶ್ಯ ಮಾಧ್ಯಮ ದವಾಗಿದ್ದವು. ಮುಂದಿನ 2000 ವರ್ಷಗಳ ಅವಧಿಯಲ್ಲಿ ಈ ದೇಸೀ ವ್ಯವಸಾಯ ಕೇಂದ್ರಿತ ನಾಗರೀಕತೆಗಳ ಮೇಲೆ ಹಾಯ್ದು ಆರ್ಯರು ತಮ್ಮ ಪ್ರಾಭಲ್ಯವನ್ನು ಭಾರತದ ಉಪಖಂಡದಲ್ಲಿ ಸ್ಥಾಪಿಸಿದರು. ಸಾಂಸ್ಕೃತಿಕವಾಗಿ ಮತ್ತು ರಾಜಕೀಯ ವಾದ ಕೊಡು-ಕೊಳ್ಳುವಿಕೆಯ ಮೂಲಕ ಆರ್ಯರಲ್ಲದ ದೇಸೀ ಸಮಾಜಗಳು, ಅವರ ಆಚರಣೆಗಳು ಹಾಗು ಅವರ ದೇವರುಗಳನ್ನು ತೀವ್ರವಾಗಿ ವಿಸ್ತಾರವಾಗುತ್ತಿದ್ದ ವೈದಿಕ ಪದ್ಧತಿಯು ನಿಧಾನವಾಗಿ ಜೀರ್ಣಿಸಿ ಕೊಳ್ಳತೊಡಗಿತು. ಹಾಗೆಯೇ ವೈದಿಕ ಸಂಸ್ಕೃತಿಯೂ ಸಹ ಅನೇಕ ಬದಲಾವಣೆಗಳನ್ನು ಕಂಡಿತು. ನಂತರದ ವೇದಗಳು, ಪುರಾಣಗಳು, ಮಹಾಕಾವ್ಯಗಳು ರೂಪಗೊಂಡಂತೆ ಡಿ.ಡಿ.ಕೋಸಂಬಿಯವರು ಗಮನಿಸುವ ಹಾಗೆ ದೇಸಿ ದೇವರುಗಳನ್ನು ಬ್ರಾಹ್ಮಣ ದೇವರುಗಳ ಜೊತೆ ಸಮೀಕರಿಸಲಾಯಿತು. ಸಮೀಕರಿಸಲಾಗದ ದೇವರುಗಳಿಗಾಗಿ ಹೊಸದಾಗಿ ಪುರಾಣಗಳನ್ನು ಸೃಷ್ಟಿಸಿ ವೈದಿಕ ಮಾನ್ಯತೆಗಳನ್ನು ನೀಡಲಾಯಿತು. ನಂತರದ ವೈಷ್ಣವ ಸಂಪ್ರದಾಯದ ಉಗಮವು, ವಿಷ್ಣು ಮತ್ತು ಅವನ ಅವತಾರಗಳನ್ನು ಕೇಂದ್ರವಾಗಿಟ್ಟುಕೊಂಡು (ಮುಖ್ಯವಾಗಿ ಕಪ್ಪು ಕೃಷ್ಣ) ದೇಸಿ ದೇವರುಗಳಿಗೆ ಪರಿಪೂರ್ಣವಾಗಿ ವೈದಿಕ ಬಣ್ಣ ನೀಡಲಾಯಿತು.

ಈ ನೆಲೆಯಲ್ಲಿ ದೇವಿಪ್ರಸಾದ್ ಚಟ್ಟೋಪಾಧ್ಯಾಯಅವರು ಮಾಡಿರುವ ಅಧ್ಯಯನ ವನ್ನು ಸ್ತ್ರೀವಾದಿ ಸಾಂಸ್ಕೃತಿಕ ಇತಿಹಾಸಜ್ಞರು ಕುತೂಹಲದಿಂದ ಗಮನಿಸಿದ್ದಾರೆ. ಅಳಿದುಳಿದ ತುಣುಕುಗಳಲ್ಲಿ, ಪುರಾತನ ಪಠ್ಯಗಳಲ್ಲಿ (ನಿಂದನೆ ಅಥವಾ ವಿರೋಧದ ರೂಪಗಳಲ್ಲಿ) ಕಂಡು ಬರುವ ದೇಸಿ ಪ್ರಜ್ಞೆಯನ್ನು ಕಟ್ಟಿಕೊಡಲು ಪ್ರಯತ್ನಿಸುವ ದೇವಿ ಪ್ರಸಾದ್ ಈ ಪ್ರಜ್ಞೆಯನ್ನು ಲೋಕಾಯತ (ವಾಚ್ಯ ಅರ್ಥ: ಜನರ ನಡುವೆ ಪ್ರಚಲಿತವಿರುವ) ಎಂದು ಕರೆಯುತ್ತಾರೆ. ಸಮುದಾಯದ ಬದುಕಿನಲ್ಲಿ ಈ ಪ್ರಜ್ಞೆಯು ಅರಳುವುದರಿಂದ ಇದು ವೈದಿಕ ತಾತ್ವಿಕತೆಗೆ ವಿರುದ್ಧವಾಗಿ ಲೌಕಿಕತೆಯನ್ನು ಮೆರೆಯುತ್ತದೆ. ಪಿತೃಪ್ರಧಾನತೆ ಮತ್ತು ಪರಲೋಕವನ್ನು ತಮ್ಮ ಬದುಕಿನ ಭಾಗವಾಗಿಸಿಕೊಂಡಿದ್ದ Pastoral ಆರ್ಯರು ಅಸ್ತಿತ್ವದಲ್ಲಿದ್ದ ಪ್ರಾಪಂಚಿಕ ವ್ಯವಸಾಯ ಸಮಾಜಗಳನ್ನು ಹಾಗು ಅವುಗಳ ಪ್ರಭಲವಾಗಿದ್ದ 'ಪ್ರಕೃತಿ' ಅಥವಾ ಸ್ತ್ರೀ ಮೂಲತತ್ವವನ್ನು ಪಲ್ಲಟಗೊಳಿಸಿ ತಮ್ಮ ವೈದಿಕ ದೋರಣೆಗಳನ್ನು ಹೇರಿದರು. ದೇಸಿ ಸಮಾಜಗಳಲ್ಲಿ ಸ್ತ್ರೀಯರು ಅನುಭವಿಸುತ್ತಿದ್ದ ಸಾಮಾಜಿಕ ಮಾನ್ಯತೆಯನ್ನು ಆರ್ಯರ ಪಿತೃಪ್ರಧಾನತೆಯು ಅಸಮರ್ಪಕವೆಂಬಂತೆ ಎತ್ತಿಹಿಡಿಯಲಾಯಿತು.

ಕ್ಲಾಸಿಕಲ್ ಪಠ್ಯಗಳ, ಅಂದರೆ ವೇದ ಗ್ರಂಥಗಳು ಹಾಗು ಪುರಾಣಗಳ ಭಿನ್ನ ಓದುಗಳು ತಿಳಿಸುವಂತೆ ವೈದ್ಧಿಕ ಮುಖ್ಯ ಪ್ರವಾಹಕ್ಕೆ ಸೆಳೆಯಲ್ಪಟ್ಟ ಸಮಾಜಗಳು ಮತ್ತು ಅವುಗಳ ದೃಷ್ಟಿಕೋನಗಳು ವೈದ್ಧಿಕಾನಂತರದ ತಾತ್ವಿಕತೆಯ ಪರಿಹಾರಗಳಾಗಿವೆ. ದೇವಿಪ್ರಸಾದ್ ಪ್ರಕಾರ ವೈದ್ಧಿಕ ತಾತ್ವಿಕತೆಯು ರೂಪಗೊಂಡಿರುವುದೇ ಪಾರಮಾರ್ಥಿಕವಲ್ಲದ ಮಾತೃ ಪ್ರಧಾನ ವ್ಯವಸ್ಥೆಯೊಂದಿಗಿನ ಸಂಘರ್ಷದಲ್ಲಿ. ಅವೈದ್ಧಿಕ ಸಾಂಖ್ಯ ಮತ್ತು ತಂತ್ರ ಪರಂಪರೆಗಳ ಸಂಕೇತಗಳಾದ ಸ್ತ್ರೀ ಶಕ್ತಿಯ ಪ್ರತೀಕವಾದ ದೇವಿಯರು ಹಿಂದೂ ದೇವಿಯರಾಗಿ ವೈದ್ಧಿಕ ದೇವರಾಶಿಯಲ್ಲಿ ಸೇರಿಕೊಂಡರು. ಮಾರ್ಕಂಡೇಯ ಪುರಾಣ (ಕ್ರಿ.ಶ. 250) ದಲ್ಲಿನ ದೇವಿ ಮಹಾತ್ಮೆ ಯು ಸಮರ ಸಾಹಸಿ 'ಕಂಡ'(Canda) ಮತ್ತವಳ ಶಕ್ತಿಯನ್ನು ಹಾಡಿಹೊಗಳುವ ರೀತಿಯು ಅವೈದ್ಧಿಕ ಪರಂಪರೆಯ ಲಕ್ಷಣವಾಗಿರುತ್ತದೆ. ಇದೇ ಭಾಗಗಳು ಕ್ರಿಶ 6ನೇ ಶತಮಾನದಲ್ಲಿ ಸಂಸ್ಕೃತ ಪಠ್ಯಗಳಿಗೆ ಸೆಳೆಯಲ್ಪಟ್ಟಿದ್ದರಿಂದ ವೈದಿಕ ತಾತ್ವಿಕತೆಯನ್ನು ಎತ್ತಿ ಹಿಡಿದವು. ಕ್ರಿಶ ಒಂದನೇ ಶತಮಾನದ ಹೊತ್ತಿಗೆ ವೈದ್ಧಿಕ ತಾತ್ವಿಕತೆಯ ಸಂಕೇತರೂಪ ಮನುಶಾಸ್ತ್ರದಲ್ಲಿ ತೀವ್ರ ಸ್ತ್ರೀದ್ವೇಷವಾಗಿ ಉಲ್ಲೇಖವಾಗಿದೆ. ವಿಮರ್ಶಕರ ಪ್ರಕಾರ ಈ ವ್ಯವಸಾಯ ಕೇಂದ್ರಿತ ಸಮಾಜಗಳ ಸಾಮಾನ್ಯ ನಿಯಮಗಳು ಪಾರಮಾರ್ಥಿಕ ಕಲ್ಪನೆಗಳನ್ನು ಅವಲಂಬಿಸಿರಲಿಲ್ಲ. ಇವತ್ತಿಗೂ ಕೂಡ ಭಾರತದ ಅನೇಕ ಭಾಗಗಳಲ್ಲಿ ಉತ್ತುವ ಮತ್ತು ಬಿತ್ತುವ ಸಂದರ್ಭಗಳಲ್ಲಿ ಪುರುಷ ದೇವರುಗಳು ಸ್ತ್ರೀತ್ವವನ್ನು ಆರೋಪಿಸಿಕೊಳ್ಳುವುದನ್ನು ಅಥವಾ ಆರಂಭಿಕ ಆಚರಣೆಗಳು ಮುಗಿದ ಮೇಲೆ ಪುರುಷ ಮೂರ್ತಿಗಳನ್ನು ಸ್ತ್ರೀ ಸಂಕೇತಗಳು

ಆಕ್ರಮಿಸಿಕೊಳ್ಳುವುದನ್ನು ಕಾಣಬಹುದು. ಹಾಗು ಚಟ್ಟೋಪಾಧ್ಯಾಯ ಗಮನಿಸುವಂತೆ ಈ ದೇವತೆಗಳು ವೀರ್ಯವತ್ತಾಗಿ, ಆಕ್ರಮಣಕಾರಿಯಾಗಿ, ಭೀಕರ ಶಕ್ತಿಯನ್ನು ಹೊಂದಿದ್ದು, ಇವತ್ತು ನಾವು ಯಾವುದನ್ನು ಪೌರುಷತ್ವಕ್ಕೆ ಸಮೀಕರಿಸುತ್ತೇವೆಯೋ ಆ ಲಕ್ಷಣಗಳನ್ನು ಹೊಂದಿದ್ದವು.

ಈ ಪ್ರಾಚೀನ ಜೀವನ ದೃಷ್ಟಿಕೋನಗಳನ್ನು ಇವತ್ತೂ ಕೂಡ ಜಾನಪದರಲ್ಲಿ ಮತ್ತು ಆದಿವಾಸಿ ಹೋರಾಟಗಳಲ್ಲಿ ಕಂಡು ಬರುತ್ತವೆ. 1920 ರಲ್ಲಿ ಬಾರ್ಡೋಲಿ ಸತ್ಯಾಗ್ರಹಕ್ಕೆ ಬುನಾದಿ ಹಾಕಿದ ಗುಜರಾತಿನ ಆದಿವಾಸಿ ಜನರು ಪಾರ್ಸಿ ಹೆಂಡದ ದೊರೆಗಳ ವಿರುದ್ಧ ಕೈಗೆತ್ತಿಕೊಂಡ ಹೋರಾಟವು ದೇವಿ ಪೂಜೆಯ ಸಂಪ್ರದಾಯವನ್ನು ಎತ್ತಿ ಹಿಡಿಯುವ ಧ್ಯೇಯವನ್ನು ಹೊಂದಿತ್ತು. ಸ್ತ್ರೀಯು ಈ ಸಂಪ್ರದಾಯುಗಳಲ್ಲಿ ಅಧ್ವ್ಯ ಶಕ್ತಿಯನ್ನು ಹೊಂದಿದ್ದಳೆಂದು ಭಕ್ತಿ ಸಾಹಿತ್ಯ ಮತ್ತು ಮಹಾಶ್ವೇತಾದೇವಿ ಮತ್ತು ಮೆಹರುನ್ನಿಸ ಪರ್ವೆಜ್ ಅವರ ಕತೆಗಳಲ್ಲಿ ಕಾಣಬಹುದು.

ಋಗ್ವೇದ ಕಾಲದಲ್ಲಿನ ಕೆಲವೊಂದು ಭಾಗ ಗಳನ್ನು ಹೊರತು ಪಡಿಸಿದರೆ, ಸಂಸ್ಕೃತ ಕಾಲದ ಸಾಹಿತ್ಯದಲ್ಲಿ ಮಹಿಳಾ ಧ್ವನಿಗಳಿಲ್ಲ. ಸಂಗಮ ಕಾಲದಿಂದ (ಕ್ರಿ.ಶ 1ನೇ) ಹಿಡಿದು 12ನೇ ಶತ ಮಾನದ ಭಕ್ತಿಕಾವ್ಯದ ವರೆಗೆ ಮಹಿಳೆಯರ ಯಾವ ಬರವಣಿಗೆ ಗಳು ದಾಖಲಾಗಿಲ್ಲ. ದೊರಕಿರುವ ಅತ್ಯಲ್ಪ ಸಾಹಿತ್ಯವು ಪಂಡಿತರ ಸಂಗ್ರಹಗಳಲ್ಲಿ ಕಂಡು ಬಂದಿರು ವಂತಹವು. ಕೆಲ ವಿಮರ್ಶಕರ ಪ್ರಕಾರ ಕ್ರಿ.ಪೂ 650 ರಲ್ಲಿ ಇವತ್ತಿನ ಕರ್ನಾಟಕದ ಭಾಗದಲ್ಲಿ ಬಾಳಿದ ವಿಜ್ಜಕ ಅಥವಾ ವಿದ್ಯಯು ನಾಲ್ಕನೇ ಶತಮಾನದ ಕವಿ ಕಾಳಿದಾಸನಿಗೆ ಸಮಾನವಾದ ಪ್ರತಿಭೆಯನ್ನು ಹೊಂದಿದ್ದಳು. ಬೌದ್ಧ ಪಂಡಿತ ವಿದ್ಯಾಕರ ಕ್ರಿ.ಶ 100 ಸಂಗ್ರಹಿಸಿರುವ ಸಂಕಲನದಲ್ಲಿ ಈಕೆಯ ಕೃತಿಯ ಕೆಲವೊಂದು ಭಾಗಗಳನ್ನು ಸಂಗ್ರಹಿಸಿದ್ದಾನೆ. ಬಹು ಜನರು ಉಲ್ಲೇಖಿಸಿರುವ ಅವಳ ಸಾಲುಗಳು ಈ ರೀತಿ ಇವೆ.

"ಕೃಷ್ಣ ಬಣ್ಣದವಳು, ನೀಲಿತಾವರೆಯ ಎಸಳಿನಂತಿರುವ,
ವಿಜ್ಜಕ, ನನ್ನ ಬಗ್ಗೆ ಅರಿಯದೆ,
ದಂಡಿನಿ ವ್ಯರ್ಥವಾಗಿ ವಿದ್ಯಾ ದೇವಿಯು ಶ್ವೇತ ವರ್ಣದವಳೆನ್ನುತ್ತಾನೆ."

ಸಂಸ್ಕೃತ ಕಾಲದಲ್ಲಿ ಕಂಡು ಬರುವ ಮಹಿಳಾ ಸಾಹಿತ್ಯದಲ್ಲಿನ ಕೊರತೆಗೆ ಕಾರಣ ಸಂಸ್ಕೃತ ಭಾಷೆ. ಈ ಭಾಷೆಯು ಆಸ್ಥಾನ ಭಾಷೆಯಾಗಿತ್ತು, ಮೇಲ್ಜಾತಿಯವರ ಹಿಡಿತದಲ್ಲಿತ್ತು. ಕೆಳಜಾತಿಯ ವರ್ಗದ ಜನ ಸಮುದಾಯ ಸ್ಥಳೀಯ ಪ್ರಾಕೃತ ಭಾಷೆಯನ್ನು ಬಳಸುತ್ತಿತ್ತು, ಒಂಬತ್ತನೇ ಶತಮಾನದ ನಾಟಕಕಾರ, ಪಂಡಿತ, ಪ್ರಾಕೃತ ಕೃತಿಗಳನ್ನು ರಚಿಸಿರುವ ರಾಜಶೇಖರ ತನ್ನ ಕೃತಿ ರಚನೆಗೆ ಸಂಪೂರ್ಣ ಸಹಕಾರ ನೀಡಿದ ತನ್ನ ಮಡದಿ ಅವಂತಿಸುಂದರಿಯನ್ನು ಉಲ್ಲೇಖಿಸುತ್ತಾನೆ. ತನ್ನ ಪ್ರಾಕೃತ ನಾಟಕ 'ಕರ್ಪೂರಮಂಜರಿ'ಯನ್ನು ಅವಳ ಬಯಕೆಯಂತೆ ಬರದೆನೆನ್ನುತ್ತಾನೆ. ತನ್ನ ಸೌಂದರ್ಯ ಮೀಮಾಂಸೆ, 'ಕಾವ್ಯ-ಮೀಮಾಂಸೆ' ಯಲ್ಲಿ , "ಹೆಣ್ಣು ಕೂಡ ಕಾವ್ಯ ಬರೆಯಬಹುದು. ಸಂವೇದನೆಗಳಿಗೆ ಮತ್ತು ತರ್ಕ ಗಳಿಗೆ ಲಿಂಗಭೇದವಿಲ್ಲ. ರಾಜಕುಮಾರಿಯರು, ಮಂತ್ರಿಗಳ ಹೆಣ್ಣು ಮಕ್ಕಳು, ಆಸ್ಥಾನ ನರ್ತಕಿಯರು, ಆಸ್ಥಾನ ಪಂಡಿತರ ಮಡದಿಯರು ಪವಿತ್ರ ಗ್ರಂಥಗಳ, ವಿಜ್ಞಾನದ ಮತ್ತು ಕಾವ್ಯ ವಿಜ್ಞಾನ ತಿಳುವಳಿಕೆಯನ್ನು ಪಡೆದಿದ್ದರು." ಎನ್ನುತ್ತಾನೆ. ಅವಂತಿಸುಂದರಿಯು ಪ್ರಾಕೃತ ಭಾಷೆಯನ್ನು ಸಾಹಿತ್ಯ ರಚನೆಗೆ ಬಳಸಿಕೊಳ್ಳಲು ನೀಡಿದ ಪ್ರೇರಣೆಯನ್ನು ನೆನೆದರೆ ಆಚ್ಚರಿಯಾಗುತ್ತದೆ. ಅವಳ ಕಾವ್ಯವನ್ನು ಅಂದಿನ ಕಾಲದ ಜನ ಇಷ್ಟಪಟ್ಟು ಓದುತ್ತಿದ್ದರು. ತನ್ನ ಪ್ರಾಕೃತ ಭಾಷಾ ನಿಘಂಟು 'ದೇಶಿನಮಾಮಾಲ' ದಲ್ಲಿ 12ನೇ ಶತಮಾನದ ಹೇಮಚಂದ್ರ ಪ್ರಾಕೃತ ಪದಗಳ ಅರ್ಥ ವಿವರಿಸಲು ಅವಳ ಕಾವ್ಯಸಾಲುಗಳನ್ನು ಉಲ್ಲೇಖಿಸಿದ್ದಾನೆ. ಕೆಲವು ಪಂಡಿತರು ಅಭಿಪ್ರಾಯ ಪಡುವಂತೆ ಅವಳ ಅನುಕೂಲಕ್ಕಾಗಿಯೇ ಧನಪಾಲ ಕ್ರಿ.ಶ ಪೂರ್ವ 972 ರಲ್ಲಿ ಪ್ರಾಕೃತ ನಿಘಂಟನ್ನು ರಚಿಸಿದನೆನ್ನುತ್ತಾರೆ. ಆದರೆ ಕಾವ್ಯ ಪ್ರತಿಭೆಯನ್ನು ಹೊಂದಿದ್ದ ಅನೇಕ ಪ್ರಾಚೀನ ಕಾಲದ ಮಹಿಳೆಯರ ಸಾಹಿತ್ಯವು ದೊರೆತಿಲ್ಲ.

(ಮುಗಿಯಿತು.)

ಅನುವಾದ: – ಡಾ॥ ಕೆ.ಬಿ. ಸರಸ್ವತಿ
n.sarassri@rediffmail.com

## ಪರಿಚಯ : ಸಂಸ್ಕೃತಿ ಮತ್ತು ಸಂಸ್ಕೃತಿ ಅಧ್ಯಯನದ ಮರುಚಿಂತನೆ: (ಭಾಗ ೧)

### ಪೂರ್ವದ ಓದು – ಪ್ರಸ್ತುತದ ಅರ್ಥೈಸಿಕೊಳ್ಳುವಿಕೆ – ಭವಿಷ್ಯದ ಚಿಂತನೆ

(ಸಂಸ್ಕೃತಿಯನ್ನು ಅನನ್ಯ ಮತ್ತು ವಿಶಿಷ್ಟ ಸಂಗತಿಯೆಂದು ಪರಿಗಣಿಸಿ ವಿವಿಧ ದೃಷ್ಟಿಕೋನಗಳಲ್ಲಿ ಅಧ್ಯಯನ ಮಾಡುತ್ತ ಅತ್ಯಂತ ಮಹತ್ವ ಪಡೆದುಕೊಳ್ಳುತ್ತಿರುವ "ಸಂಸ್ಕೃತಿ ಅಧ್ಯಯನ" ಎಂಬ ಪರಿಕಲ್ಪನೆ ತೀರಾ ಇತ್ತೀಚಿನದು. ಅದು ಶುರುವಾದದ್ದೇ 1950ರ ಸುಮಾರಿನಲ್ಲಿ ಪಶ್ಚಿಮ ದೇಶಗಳಲ್ಲಿ, ಅದರಲ್ಲೂ ಮುಖ್ಯವಾಗಿ ಇಂಗ್ಲೆಂಡಿನ The Birmingham centre for contemporary culture studies ನೊಂದಿಗೆ ಮತ್ತು ಅದೇ ಸಮಯದಲ್ಲಿ ಪ್ರವರ್ಧಮಾನಕ್ಕೆ ಬಂದ ರೇಮಂಡ್ ವಿಲಿಯಮ್ಸ್, ರಿಚರ್ಡ್ ಹೊಗಾರ್ಟ್, ಇ ಪಿ ಥಾಂಪ್‌ಸನ್, ಸ್ಟುವರ್ಟ್ ಹಾಲ್, ಟೋನಿ ಬೆನೆಟ್, ಮೊದಲಾದವರೊಂದಿಗೆ. ಇವರಿಗಿಂತಲೂ ಮುಂಚೆ ಕೂಡ ಮ್ಯಾಥ್ಯೂ ಆರ್ನಾಲ್ಡ್, ಎಫ್ ಆರ್ ಲೀವಿಸ್, ರಸ್ಕಿನ್, ಕಾರ್ಲೈಲ್, ಮೊದಲಾದವರು ಸಂಸ್ಕೃತಿ ಬಗೆಗಿನ ತಮ್ಮದೇ ಆದ ಸಿದ್ಧಾಂತಗಳನ್ನೂ, ದೃಷ್ಟಿಕೋನಗಳನ್ನೂ ಪ್ರತಿಪಾದಿಸಿದ್ದರು.

ಆದರೆ 1930ರ ದಶಕದವರೆಗೂ "ಸಂಸ್ಕೃತಿ ಅಧ್ಯಯನ" ಎಂಬ ಪ್ರತ್ಯೇಕವಾದ ಸ್ವತಂತ್ರ discipline ಇರಲಿಲ್ಲ ಹಾಗೂ ಸಂಸ್ಕೃತಿಯನ್ನು ಕೇವಲ ಕೆಲವೇ ವಿಶೇಷ ಸಂದರ್ಭಗಳಾದ ಸಂಪ್ರದಾಯ, ಪದ್ಧತಿ, ಆಚರಣೆ, ವೇಷ ಇತ್ಯಾದಿ ಅರ್ಥಗಳಲ್ಲಿ ವ್ಯಾಖ್ಯಾನಿಸಲಾಗುತ್ತಿತ್ತು. ಆ ಸಮಯದಲ್ಲಿ ಸಂಸ್ಕೃತಿ ಅಧ್ಯಯನದ ಮುಖ್ಯ ಚಿಂತಕನಾಗಿ ಹೊರಹೊಮ್ಮಿದ ಎಫ್ ಆರ್ ಲೀವಿಸ್, ಸಂಸ್ಕೃತಿಯನ್ನು ಹಿಂದಿನ ವಾಖ್ಯಾನಗಳ ದೃಷ್ಟಿಯಿಂದಲೇ ವಿವರಿಸಿದರೂ ಸಂಸ್ಕೃತಿ ಅಧ್ಯಯನಕ್ಕೆ ವಿಭಿನ್ನ ರೂಪ ಕೊಟ್ಟ, ಜೊತೆಗೆ "ಇಂಗ್ಲಿಷ್ ಸಾಹಿತ್ಯದ ಅಧ್ಯಯನವು ಕೇವಲ ಕಾವ್ಯ, ಕಥೆ, ನಾಟಕ, ಕಾದಂಬರಿಗಳ ಓದು ಮಾತ್ರವಲ್ಲ; ಅವುಗಳ ಮೂಲಕ ಅಭಿವ್ಯಕ್ತವಾಗುವ ಸಂಸ್ಕೃತಿಗಳ ಅಧ್ಯಯನ ಕೂಡಾಆಗಿದೆ" ಎಂದು ಪ್ರತಿಪಾದಿಸಿದ. ಈ ಮೂಲಕ ಸಂಸ್ಕೃತಿ ಅಧ್ಯಯನಕ್ಕೆ ವಿಶ್ವವಿದ್ಯಾನಿಲಯಗಳಲ್ಲಿ ಮಹತ್ವದ ಸ್ಥಾನ ಕಲ್ಪಿಸಿಕೊಟ್ಟ. ಆದರೆ 1950–60ರ ದಶಕದ ಚಿಂತಕರಾದ ರೇಮಂಡ್ ವಿಲಿಯಮ್ಸ್, ರಿಚರ್ಡ್ ಹೊಗಾರ್ಟ್, ಇ ಪಿ ಥಾಂಪ್‌ಸನ್ ಮತ್ತಿತರು ಹಿಂದಿನ ವ್ಯಾಖ್ಯಾನಗಳನ್ನು ಅದರಲ್ಲೂ ಮುಖ್ಯವಾಗಿ ಸಂಸ್ಕೃತಿ ಬಗೆಗಿನ ಆರ್ನಾಲ್ಡಿಯನ್ ಮತ್ತು ಲೀವಿಸೈಟ್ ದೃಷ್ಟಿಕೋನಗಳನ್ನು ಕಟುವಾಗಿ ಟೀಕಿಸಿದರು. ಈ ಆಧುನಿಕ ಚಿಂತಕರ ಸಂಸ್ಕೃತಿ ಅರ್ಥವಿವರಣೆಯನ್ನು ತಿಳಿಯುವ ಮುನ್ನ ಈ ಲೇಖನ ಸರಣಿಯ ಮೊದಲ ಭಾಗದಲ್ಲಿ ಮ್ಯಾಥ್ಯೂ ಆರ್ನಾಲ್ಡ್ ಮತ್ತು ಎಫ್ ಆರ್ ಲೀವಿಸ್ ಅವರ ಸಂಸ್ಕೃತಿ ಬಗೆಗಿನ ದೃಷ್ಟಿಕೋನವನ್ನು ವಿವರಿಸಲಾಗಿದೆ.)

### ಸಂಸ್ಕೃತಿ ಬಗೆಗಿನ ಮ್ಯಾಥ್ಯೂ ಆರ್ನಾಲ್ಡ್ ಅವರ ದೃಷ್ಟಿಕೋನ:



ಬ್ರಿಟಿಷ್ ಸಾಹಿತಿ, ಚಿಂತಕ, ವಿಮರ್ಶಕ ಮತ್ತು ಶಿಕ್ಷಣ ತಜ್ಞನಾದ ಮ್ಯಾಥ್ಯೂ ಆರ್ನಾಲ್ಡ್ (1822–88) ತನ್ನ ಕೃತಿ "ಕಲ್ಚರ್ ಅಂಡ್ ಅನಾರ್ಕಿ" (1869)ಯಲ್ಲಿ ಸಂಸ್ಕೃತಿಯನ್ನು "ಸಮತೋಲಿತ ಸ್ವಯಂ ಪರಿಪೂರ್ಣತೆ" ಎಂದು ವ್ಯಾಖ್ಯಾನಿಸಿದನು. ಅವನ ಪ್ರಕಾರ ಸಂಸ್ಕೃತಿ "ಮನಸ್ಸಿನ ಒಂದು ಸ್ಥಿತಿ, ಮನೋಭಾವ ಮತ್ತು ಸಂವೇದನಾಶೀಲತೆ". ಹಾಗೆ ಹೇಳುವ ಮೂಲಕ ಸಂಸ್ಕೃತಿಯನ್ನು 'ಗಂಭೀರ' (serious) ಮತ್ತು 'ಜನಪ್ರಿಯ' (popular) ಸಂಸ್ಕೃತಿಗಳೆಂದು ವಿಭಜಿಸಿದನು. ಗಂಭೀರ ಸಂಸ್ಕೃತಿಯ ಬಗ್ಗೆ ತನಗಿದ್ದ ಒಲವನ್ನು ತೋರಿಸಲು "ಸಂಸ್ಕೃತಿಯು ಪರಿಪೂರ್ಣತೆಯನ್ನು ಪಡೆಯುವ ನಿರಂತರ ಪ್ರಯತ್ನ" ಎಂದು ವ್ಯಾಖ್ಯಾನಿಸಿದನು. ಇಲ್ಲಿ ಉನ್ನತವೆಂದು ಪರಿಗಣಿಸಿದ ಮತ್ತು ನೈತಿಕ ಮೌಲ್ಯಗಳಿರುವ ವಿಚಾರಗಳ ನಡುವೆ ಮಾತ್ರ ಸಾಮರಸ್ಯ ಇರಲು ಸಾಧ್ಯ ಎಂದು ಹೇಳುವ ಮೂಲಕ ಸಂಸ್ಕೃತಿಯನ್ನು ನೈತಿಕತೆಯ ಕಾರ್ಯವಾಹಕ ಎಂದನು. ಸಂಸ್ಕೃತಿಯ ಅವಿಭಾಜ್ಯ ಅಂಗಗಳಾದ ಕಲೆ, ಸಾಹಿತ್ಯ ಇತ್ಯಾದಿಗಳಿಗೆ ಬೌದ್ಧಿಕತೆ, ಶ್ರೇಷ್ಠ ಆಲೋಚನೆಗಳನ್ನು ಆಧಾರವಾಗಿಸಿದನು.

ಹೀಗಾಗಿಯೇ ಅವನ ಸಂಸ್ಕೃತಿ ವಿವರಣೆಯಲ್ಲಿ ಶ್ರೇಷ್ಠ ಮಾನವಿಕ ಮೌಲ್ಯಗಳೆಂದು ಪರಿಗಣಿಸಲಾದ ಉನ್ನತ ಮಟ್ಟದ ಜೀವನ, ಶ್ರೇಷ್ಠ ಆಲೋಚನೆ ಇತ್ಯಾದಿಗಳಿಗೆ ಮಹತ್ವ ಇದೆ ಮತ್ತು ಇವುಗಳ ಮೂಲಕವೆ ಎಲ್ಲರೂ ಪರಿಪೂರ್ಣರಾಗಲು ಸಾಧ್ಯ ಎಂದು ಪ್ರತಿಪಾದಿಸಿದನು. ಅವನ ಸಂಸ್ಕೃತಿ ವಿಮರ್ಶೆಯಲ್ಲಿ ಎರಡು ಮುಖ್ಯ ಅಂಶಗಳಿವೆ:

- **Sweetness**: ಉನ್ನತ ಮನಸ್ಥಿತಿ, ಒಳ್ಳೆಯದನ್ನು ಮಾತ್ರ ಒಪ್ಪುವ ಮನೋಭಾವ. ಅಂತಿಮವಾಗಿ ಇದು ಸಂವೇದನಾಶೀಲತೆಯನ್ನು ಪ್ರತಿಪಾದಿಸುತ್ತದೆ.
- **Light**: ಇದು ಜ್ಞಾನ ಎಂಬ ಅರ್ಥ ಕೊಡುವುದರಿಂದ ಬೌದ್ಧಿಕತೆ, ಗಂಭೀರ ಮನಸ್ಥಿತಿಗಳಿಗೆ ಸಂಬಂಧಿಸಿದ್ದುದಾಗಿದೆ.

ಹೀಗೆ ಇವನ ಸಂಸ್ಕೃತಿ ವಿಮರ್ಶೆಯು ಸಂಪೂರ್ಣವಾಗಿ refinement & perfection ಅನ್ನು ಪ್ರತಿನಿಧಿಸಿದ್ದರಿಂದ ನಂತರ ಬಂದ ವಿಮರ್ಶಕರು ಇವನ ವ್ಯಾಖ್ಯಾನವನ್ನು "High Minority View of Culture" (ಸಂಸ್ಕೃತಿ, ಬಗೆಗಿನ ಅಲ್ಪಸಂಖ್ಯಾತ, ಉನ್ನತ ವರ್ಗದವರ ದೃಷ್ಟಿಕೋನ) ಎಂದು ಕಟುವಾಗಿ ಟೀಕಿಸಿದರು.

### ಫ್ರಾಂಕ್ ರೇಮಂಡ್ ಲೀವಿಸ್ ಅವರ ಸಂಸ್ಕೃತಿ ವಿಮರ್ಶೆ:

ಸಂಸ್ಕೃತಿ ಅಧ್ಯಯನಕ್ಕೆ ವಿಶೇಷ ರೂಪ ಕೊಟ್ಟ ಎಫ್. ಆರ್. ಲೀವಿಸ್ (1895–1978) ಬ್ರಿಟೀಷ್ ತತ್ವಶಾಸ್ತ್ರಜ್ಞ, ವಿಮರ್ಶಕ ಮತ್ತು ಸಂಸ್ಕೃತಿ ಚಿಂತಕ. ಇವನೂ ಕೂಡ ತನ್ನ ಕೃತಿ "ಮಾಸ್ ಸಿವಿಲೈಜೇಷನ್ ಅಂಡ್ ಮೈನಾರಿಟಿ ಕಲ್ಚರ್" (1933)ನಲ್ಲಿ ತನ್ನ ಹಿಂದಿನ ಎಲಿಯಟ್, ಆರ್ನಾಲ್ಡ್ ಮತ್ತಿತರರನ್ನೇ ಅನುಕರಿಸಿದನು. ಆದರೆ ಸಂಸ್ಕೃತಿ ವಿಮರ್ಶೆಗೆ ಇವನು ನವ್ಯ ವಿಮರ್ಶೆ (New Criticism)ಯ ಮಾರ್ಗಗಳಾದ textual analysis, close reading, philosophical justification, exegisis (ಓದು ಮತ್ತು ವಿಶ್ಲೇಷಣೆ) ಇತ್ಯಾದಿಗಳನ್ನು ಟಿ ಎಸ್ ಎಲಿಯಟ್ ಪ್ರಭಾವದೊಂದಿಗೆ ಬಳಸಿದನು. ಸಂಸ್ಕೃತಿ ಅಧ್ಯಯನಕ್ಕೆ ಆರ್ನಾಲ್ಡ್‌ನಂತೆ ಇವನೂ ಕೂಡ ಸಂವೇದನಾಶೀಲತೆಯ ಅಗತ್ಯವನ್ನು ಪ್ರತಿಪಾದಿಸಿದ. ವಿಮರ್ಶಕ ಭಾಷೆಯ ಬಗ್ಗೆ ಸೂಕ್ಷ್ಮ ಸಂವೇದಿಯಾಗಿರಬೇಕು ಮತ್ತು ತನ್ನ ಪ್ರತಿಕ್ರಿಯೆಗಳಲ್ಲೂ ಆತ ಸಂವೇದನಾಶೀಲನಾಗಿಯೇ ಇರಬೇಕೆಂದು ವಿವರಿಸಿದ. ಇದನ್ನೇ ಐ ಆರ್ ರಿಚರ್ಡ್ಸ್ ತನ್ನ "ಪ್ರಾಯೋಗಿಕ ವಿಮರ್ಶೆಯ (practical criticism)ಲ್ಲಿ" ವಿವರಿಸಿದನು. ಅಲ್ಲಿಯವರೆಗೂ ಅಸ್ತಿತ್ವದಲ್ಲಿದ್ದ ಮೂಲ ಸಂಸ್ಕೃತಿಗೆ ಆಧುನಿಕ ವಿಜ್ಞಾನ ಮತ್ತು ಕೈಗಾರಿಕಾ ಬಂಡವಾಳಶಾಹಿಯಿಂದ ಅಪಾಯವಿದೆ ಎಂದು ಭಾವಿಸಿ ಅವುಗಳ ವಿರುದ್ಧ ತಾನು ನಿಜವಾದ ಸಂಸ್ಕೃತಿಯೆಂದು ಭಾವಿಸಿದ್ದ ಸಾಮಾಜಿಕ ಜೀವನ ಮತ್ತು ಭಾಷೆಯನ್ನು ಕೇಂದ್ರವಾಗಿಸಿಕೊಂಡ ಉನ್ನತ ಸಾಹಿತ್ಯಕ ಮಾದರಿಯೊಂದನ್ನು ಪ್ರತಿಪಾದಿಸಿದ. ಆರ್ನಾಲ್ಡ್‌ನಂತೆ ಇದೂ ಕೂಡ ಸಂಸ್ಕೃತಿಯ ಬಗೆಗಿನ ಅಲ್ಪಸಂಖ್ಯಾತ ಉನ್ನತ ವರ್ಗದವರ ದೃಷ್ಟಿಕೋನವೇ ಆಗಿತ್ತು. ಜೊತೆಗೆ "ಬ್ರಿಟಿಷ್ ಸಂಸ್ಕೃತಿಯು ವಿಭಜನೆಯಾಗಿ ಮಾಸ್ ಕಲ್ಚರ್‌ನ ಹುಟ್ಟಿನೊಂದಿಗೆ ಮೂಲ ಬ್ರಿಟಿಷ್ ಸಂಸ್ಕೃತಿ ಅವನತಿಯ ಹಾದಿ ಹಿಡಿದಿದೆ" ಎಂದು ವಿವರಿಸಿದ. ತನ್ನ ಈ ವಾದದಲ್ಲಿ ಆಗ ಹುಟ್ಟಿಕೊಂಡ "ಆಧುನಿಕ ಸಂಸ್ಕೃತಿ (modern culture) ಸಂಸ್ಕೃತಿಯೇ ಅಲ್ಲ; ಪಾಶ್ಚಿಮಾತ್ಯ ಸಂಸ್ಕೃತಿಯಂತೆ ಈ ಸಂಸ್ಕೃತಿಗೆ ಯಾವುದೇ ನೈತಿಕ ಮೌಲ್ಯಗಳಿಲ್ಲ; ಇದು ಸಂಪೂರ್ಣವಾಗಿ ಅಮೇರಿಕೀಕರಣ ಆಗಿದೆ" ಎಂದೆಲ್ಲ ಪ್ರತಿಪಾದಿಸಿದ. "ಆಧುನಿಕ ಸಂಸ್ಕೃತಿ"ಯೆಂಬ ಪರಿಕಲ್ಪನೆಯನ್ನು ತೀಕ್ಷ್ಣವಾಗಿ ಖಂಡಿಸಿದ ಲೀವಿಸ್ ಅದನ್ನು ಉನ್ನತ ಸಾಂಪ್ರದಾಯಿಕ ಸಂಸ್ಕೃತಿಯಂತಲ್ಲದ (sterile high culture) ಯಾವುದೇ ನೈತಿಕ ಮೌಲ್ಯಗಳಿಲ್ಲದ mindless low culture ಎಂದು ದೂಷಿಸಿದ.

ಆದರೆ ರೇಮಂಡ್ ವಿಲಿಯಮ್ಸ್ ಮತ್ತು ನಂತರದ ಸಂಸ್ಕೃತಿ ಚಿಂತಕರ ಉದಯದೊಂದಿಗೆ ಲೀವಿಸೈಟ್ ಸಂಸ್ಕೃತಿ ದೃಷ್ಟಿಕೋನವೂ ಕೂಡ "highly elitist" ಮತ್ತು minority view of culture ಎಂದು ಟೀಕಿಸಲ್ಪಟ್ಟಿತು.

ಲೀವಿಸ್‌ನ ಸಂಸ್ಕೃತಿ ವಿಮರ್ಶೆ ಕಟು ಟೀಕೆಗೆ ಒಳಗಾದರೂ ಸಂಸ್ಕೃತಿ ಅಧ್ಯಯನಕ್ಕೆ ಮಹತ್ವದ ರೂಪ, ಸ್ಥಾನ ಕೊಟ್ಟವರಲ್ಲಿ ಲೀವಿಸ್ ಮೊದಲಿಗ. ಮೂಲತಃ ನವ್ಯ ವಿಮರ್ಶಕನಾಗಿದ್ದರೂ ಸಂಸ್ಕೃತಿ ಅಧ್ಯಯನದಲ್ಲಿಯೇ ನಿರತನಾಗಿದ್ದ ಇವನು ಸಂಸ್ಕೃತಿ ಅಧ್ಯಯನದಲ್ಲಿ ಮಹತ್ವದ ಸ್ಥಾನ ಪಡೆದಿದ್ದಾನೆ.ಇದೇ ಸಮಯದಲ್ಲಿ ಬಂದ ರಸ್ಕಿನ್ ಮತ್ತು ಕಾರ್ಲೈಲ್ ಕೂಡ ಆಧುನಿಕ ಸಂಸ್ಕೃತಿಯನ್ನು ಟೀಕಿಸಿದರು. ಇವರ ಸಂಸ್ಕೃತಿ ವಿಮರ್ಶೆಯನ್ನು **romantic anti-capitalist line of cultural critique** ಎಂದು ಕರೆಯಲಾಗಿದೆ.

ಜೊತೆಗೆ ಅಡೋರ್ನೋ ಮತ್ತು ಹಾರ್ಕ್‌ಹೈಮರ್ ಕೂಡ ತಮ್ಮ ಕೃತಿ "ದಿ ಕಲ್ಚರ್ ಇಂಡಸ್ಟ್ರಿ: ಎನ್‌ಲೈಟನ್‌ಮೆಂಟ್ ಆ್ಯಸ್ ಮಾಸ್ ಡಿಸೆಪ್ಷನ್" ನಲ್ಲಿ ಪಾಪ್ಯುಲರ್ ಕಲ್ಚರ್‌ನ್ನು (ಜನಸಾಮಾನ್ಯರ ಸಂಸ್ಕೃತಿ) ಸಂಸ್ಕೃತಿ ಕೈಗಾರಿಕೆಯಲ್ಲಿ ಉತ್ಪಾದನೆಯಾಗುವ ಉತ್ಪನ್ನ ಎಂದೂ, ಅದಕ್ಕೆ ಯಾವುದೇ ಕಲಾತ್ಮಕವಾದ ಅಥವಾ ನೈತಿಕವಾದ ಮೌಲ್ಯಗಳಿಲ್ಲವೆಂದೂ ಪ್ರತಿಪಾದಿಸಿದರು.

ಕಾರ್ಲ್ ಮಾರ್ಕ್ಸ್ ಕೂಡ ಸಂಸ್ಕೃತಿ ಎಂಬುದು ಕೇವಲ ಕನಸು ಮತ್ತು ಅಂತಹ ರೂಪಕಗಳಿಗೆ ಸಂಬಂಧಿಸಿದೆ ಎಂದು ವಾದಿಸಿದನು.

(... ಮುಂದಿನ ಸಂಚಿಕೆಯಲ್ಲಿ ಮುಂದುವರೆಯುವುದು)

- ಸಿದ್ಧರಾಮಯ್ಯ ಡಿ.ಎಂ
kalpasahyadri@gmail.com



Prathispanda Kannada Monthly literary cultural periodical Title verification no.- KARKAN 22840/10/1/2012 TC

Book Post

ವಿಳಾಸ:
ಪ್ರತಿಸ್ಪಂದ
ತೋಟದ ಮನೆ ನಂ: 107 (25)
ಕಂಚಾಘಟ್ಟ ಹೊಸ ಬಡಾವಣೆ
ತಿಪಟೂರು - 572201

Editor and Publisher : K.R.Basavaraju, Farm House No : 107 (25)
Kanchagatta New Extension , Tiptur- 572201, Karnataka. Email : prathispandha@gmail.com
Printed at : Mithra DTP Works, Nittur